# ನಮ್ಮ ಮಾನಸ

ಏಪ್ರಿಲ್ 2008

ಸಂಪುಟ : 1 ಸಂಚಿಕೆ : 12

*Editor, Printer and Publisher*
***Rajeshwari H.S.,***
*No. 114/5, 9th Cross, 2nd Main*
*Chamarajpet, Bangalore - 560 018.*
*Mobile : 9449345698*

*Printed at*
***ILA Mudrana***
*No. 36, 40 Ft. Road,*
*Raghavanagara*
*New Timberyard Layout*
*Bangalore - 560 026.*
*© : 26757159*

## ಪರಿವಿಡಿ

* **ವಿಕೃತ ಮನಸ್ಸು – ಪ್ರವೃತ್ತಿಗಳನ್ನು ಖಂಡಿಸಿ; ಶಿಕ್ಷಿಸಿ** ... 3
* **ಒಂದು ನೂರು ವರ್ಷಗಳ ಹೋರಾಟ**
  *ನೀಲಾಂಜನ ಬಿಸ್ವಾಸ್* ... 5
* **'ಸೆಕ್ಸ್ ಬರೀ ಪುರುಷನ ಅಗತ್ಯ ಮಾತ್ರವಲ್ಲ'**
  *ಲೈಂಗಿಕ ಕಾರ್ಯಕರ್ತೆ ನಳಿನಿ ಜಮೀಲಾ* ... 7
* **'ಗರೀಬ್ ಕಿ ಜೋರು'– ಇಸ್ಮತ್ ಚುಗ್ತೈ ಅವರ ಕಥೆ 'ಲಿಹಾಫ್'ನ ನೆನಪು ಮತ್ತು 'ಕೌದಿ' ನಾಟಕ**
  *ಶ್ರೀಕಾಂತ ಪ್ರಭು* ... 10
* **ಕವಿತಾ ಲಂಕೇಶ್ ನಿರ್ದೇಶನದ 'ಅವ್ವ'**
  *ರಾಜೇಶ್ವರಿ ಎಚ್.ಎಸ್.* ... 12
* **ಮಾರುವ ವೃತ್ತಿಯ ಮಾನಿನಿಯರು–ಕಥೆ–ವ್ಯಥೆ**
  *ವೆಂ. ವನಜ* ... 13
* **ಸೂತಕ ಕಳೆದು (ಕವಿತೆ)**
  *ಭಾರತೀದೇವಿ ಪಿ.* ... 15
* **ಒಳ–ಹೊರಗುಗಳ ಸಂಬಂಧ: ರೂಪಶ್ರೀ ಅವರ ಕಲೆ**
  *ಪ್ರೊ. ಎಂ.ಎಚ್. ಕೃಷ್ಣಯ್ಯ* ... 16





*ಮುಖಪುಟ ಚಿತ್ರ*
**ಎಸ್.ಆರ್. ರೂಪಶ್ರೀ ಅವರ ಕಲಾಕೃತಿ**

●

*ಚಂದಾ ವಿವರ*

| | |
|---|---|
| ಬಿಡಿಪ್ರತಿ | 8–00 ರೂ. |
| ವಾರ್ಷಿಕ ಚಂದಾ (ವಿಶೇಷ ಸಂಚಿಕೆಯೊಂದಿಗೆ) | 100–00 ರೂ. |
| ಸಂಸ್ಥೆಗಳಿಗೆ | 150–00 ರೂ. |

# ನಮ್ಮ ಮಾನಸ

114/5, 9ನೇ ತಿರುವು, 2ನೇ ಮುಖ್ಯರಸ್ತೆ, ಚಾಮರಾಜಪೇಟೆ
ಬೆಂಗಳೂರು – 560 018

*ಚಂದಾಹಣವನ್ನು ಈ ವಿಳಾಸಕ್ಕೆ ಚೆಕ್ ಅಥವಾ ಡಿ.ಡಿ. ಮೂಲಕ ಕಳಿಸಬಹುದು*

– – –

**ಮೈಸೂರಿನಲ್ಲಿ ಓದುಗರು ಪ್ರತಿಗಳಿಗೆ ಹಾಗೂ ಚಂದಾ ನವೀಕರಣಕ್ಕೆ ಸಂಪರ್ಕಿಸಿ**

**ವೆಂ. ವನಜ**
*2329, 12ನೇ ಮೈನ್, 2ನೇ ಹಂತ, ವಿಜಯನಗರ*
*ಮೈಸೂರು – 570 017*



ಸಂಪಾದಕೀಯ

# ವಿಕೃತ ಮನಸ್ಸು – ಪ್ರವೃತ್ತಿಗಳನ್ನು ಖಂಡಿಸಿ; ಕಠಿಣವಾಗಿ ಶಿಕ್ಷಿಸಿ

ರೂಪೆನ್ ಬಜಾಜ್ ಅನಕ್ಷರಸ್ಥ, ಅವಿದ್ಯಾವಂತ ಮಹಿಳೆಯಲ್ಲ, ಆಕೆ ಒಬ್ಬ ಐ.ಎ.ಎಸ್. ಅಧಿಕಾರಿ. 1988ರ ಜುಲೈ 18ರಂದು ಅಧಿಕೃತ ಔತಣಕೂಟದಲ್ಲಿ ಭಾಗವಹಿಸಿದ್ದ ರೂಪೆನ್‌ಬಜಾಜ್ ಜೊತೆ ಪಂಜಾಬ್‌ನ ಪೊಲೀಸ್ ಮಹಾನಿರ್ದೇಶಕರಾಗಿದ್ದ ಕೆ.ಪಿ.ಎಸ್. ಗಿಲ್ ಅಸಭ್ಯವಾಗಿ ನಡೆದುಕೊಂಡಿದ್ದರು. ರೂಪೆನ್ ತನಗಾದ ಅವಮಾನವನ್ನು ಸಹಿಸಲಾರದೇ ರಾಜ್ಯಪಾಲರನ್ನೂ ಸೇರಿದಂತೆ ಮೂವರು ಉನ್ನತಾಧಿಕಾರಿಗಳಿಗೆ ಗಿಲ್ ವಿರುದ್ಧ ದೂರು ನೀಡಿದ್ದರು. ಈ ಮೂವರೂ ಪುರುಷರು ತಮ್ಮ ಉನ್ನತ ಅಧಿಕಾರವನ್ನು ಬಳಸಿ ಪ್ರಕರಣವನ್ನು ಮುಚ್ಚಿಹಾಕುವ ಪ್ರಯತ್ನವನ್ನು ಮಾಡಿದ್ದರು.

ರೂಪೆನ್ ಹೆದರಿ ಹಿಂಜರಿಯಲಿಲ್ಲ. ನ್ಯಾಯ ಪಡೆಯುವ ಛಲದಿಂದ ನ್ಯಾಯಾಲಯದ ಮೊರೆ ಹೋಗುವುದರ ಮೂಲಕ 'ಲೈಂಗಿಕ ದೌರ್ಜನ್ಯ'ದ ಬಗ್ಗೆ ರಾಷ್ಟ್ರೀಯ ಚರ್ಚೆ ನಡೆಯುವಂತೆ ಮಾಡಿದ್ದರು. ಸುದೀರ್ಘವಾದ 17 ವರ್ಷದ ನಿರಂತರ ಹೋರಾಟದ ಫಲವಾಗಿ ಸುಪ್ರೀಂ ಕೋರ್ಟ್ ಗಿಲ್‌ಅವರಿಗೆ ಶಿಕ್ಷೆಯನ್ನು ವಿಧಿಸಿತ್ತು.

ಈ ಪ್ರಕರಣ ನಡೆದು ಇಂದಿಗೆ 20 ವರ್ಷಗಳು ಸಂದಿವೆ. ಈ ಪ್ರಕರಣದಿಂದ ಮಹಿಳೆಯರ ಮೇಲೆ ನಡೆಯುವ 'ಲೈಂಗಿಕ ದೌರ್ಜನ್ಯ' ಕುರಿತು ಹಲವಾರು ಪ್ರಕರಣಗಳು ಬೆಳಕಿಗೆ ಬರತೊಡಗಿದವು. ಮಹಿಳಾ ಸಂಘಟನೆಗಳ ನಿರಂತರ ಹೋರಾಟಧ ಫಲವಾಗಿ ಕೇಂದ್ರ ಸರ್ಕಾರ ದುಡಿಯುವ ಸ್ಥಳದಲ್ಲಿ ಲೈಂಗಿಕ ಕಿರುಕುಳ ವಿರೋಧಿ ಕಾನೂನನ್ನು ಜಾರಿಗೆ ತಂದಿದ್ದರೂ ಇಂದು ಪ್ರತಿ 53 ನಿಮಿಷಕ್ಕೆ ಒಂದು ಲೈಂಗಿಕ ಕಿರುಕುಳ ನಡೆಯುತ್ತಿದೆಯೆಂದು ಅಂದಾಜು ಮಾಡಲಾಗಿದೆ.

ಇತ್ತೀಚೆಗೆ ಒರಿಸ್ಸಾದ ವಿಧಾನಸಭೆಯ ಸ್ಪೀಕರ್ ಮಹೇಶ್ವರ ಮೊಹಂತಿಯವರು ತಮಗೆ ಲೈಂಗಿಕ ಕಿರುಕುಳ ನೀಡಿದ್ದಾರೆಂದು ಮಹಿಳಾಮಾರ್ಷಲ್ ಗಾಯತ್ರಿ ಪಾಂಡೆ ದೂರು ನೀಡಿದ್ದಾರೆ. ಮೊಹಂತಿಯವರು ತನ್ನನ್ನು ಮುಟ್ಟಲು ಪದೇ ಪದೇ ಪ್ರಯತ್ನಿಸುವುದರ ಜೊತೆಗೆ ಖಾಸಗಿಯಾಗಿ ಭೇಟಿಯಾಗುವಂತೆ ಕಾರನ್ನು ಮನೆಗೆ ಕಳುಹಿಸುತ್ತಿದ್ದರು ಎಂಬುದನ್ನು ಗಾಯತ್ರಿ ಬಹಿರಂಗ ಪಡಿಸಿದ್ದಾರೆ. ಗಾಯತ್ರಿ ತನಗೆ ದೊರೆಯದಿದ್ದ ಕಾರಣ ಆಕೆಯನ್ನು ಎರಡುಬಾರಿ ಕ್ಷುಲ್ಲಕ ಕಾರಣಗಳಿಗಾಗಿ ಅಮಾನತ್ತಿನಲ್ಲಿರಿಸಲಾಗಿದೆ. ಒರಿಸ್ಸಾ ವಿಧಾನಸಭೆಯಲ್ಲಿ ಮೊಹಂತಿಯ ರಾಜೀನಾಮೆಗೆ ಒತ್ತಾಯಿಸುತ್ತಿರುವುದರ ಜೊತೆಗೆ ಇದೊಂದು ರಾಜಕೀಯ ಪಿತೂರಿ ಎಂದು ಸಹ ಆರೋಪಿಸಲಾಗುತ್ತಿದೆ.

ಹೊಸ ವರ್ಷದ ದಿನದಂದು ಮುಂಬಯಿಯಲ್ಲಿ ಇಬ್ಬರು ಹೆಣ್ಣುಮಕ್ಕಳ ಮೇಲೆ ಪುರುಷರ ಗುಂಪು ಲೈಂಗಿಕ ದೌರ್ಜನ್ಯವೆಸಗುತ್ತಿದ್ದುದನ್ನು ಮಾಧ್ಯಮಗಳು ಸೆರೆಹಿಡಿದು ಬೆಳಕಿಗೆ ತಂದ ಬೆನ್ನಲ್ಲೇ ಗಾಯತ್ರಿ ಪಾಂಡಾ ಅವರ ದೂರು. ಇವೆಲ್ಲ ನಮ್ಮ ದೇಶದಲ್ಲಿ ಮಹಿಳೆಯರಿಗಿರುವ ರಕ್ಷಣೆಯ ಅವ್ಯವಸ್ಥೆಯ ಬಗ್ಗೆ ಗಂಭೀರವಾದ ಚಿಂತನೆಗೆ ಹಚ್ಚುತ್ತವೆ.

ಶಾಲಾ ಬಾಲಕಿಯರ ಮೇಲೆ ಶಿಕ್ಷಕರೇ ಲೈಂಗಿಕ ದೌರ್ಜನ್ಯ ಎಸಗುವ ಪ್ರಕರಣಗಳು ವರದಿಯಾಗುತ್ತಲೇ ಇರುತ್ತವೆ. ಬಾಲಕಿಯರನ್ನು ಬೆದರಿಸುವುದು, ಹೆಚ್ಚು ಅಂಕಗಳನ್ನು ನೀಡುವ ಆಮಿಷ ಒಡ್ಡುವುದು, ಅವರ ಸಾಮಾಜಿಕ, ಆರ್ಥಿಕ ಪರಿಸ್ಥಿತಿಯನ್ನು ಹಾಗೂ ಅವರ ಮುಗ್ಧತೆಯನ್ನು ದುರುಪಯೋಗ ಪಡಿಸಿಕೊಂಡು ತಮ್ಮ ಲೈಂಗಿಕ ತೃಷೆಯನ್ನು ತೀರಿಸಿಕೊಳ್ಳುವುದು ಕಂಡುಬರುತ್ತದೆ. ಭಾರತದಲ್ಲಿ ಶಾಲಾಬಾಲಕಿಯರ ಮೇಲೆ ಹೆಚ್ಚುತ್ತಿರುವ ಲೈಂಗಿಕ ದೌರ್ಜನ್ಯದ ಪ್ರಕರಣಗಳನ್ನು ಕುರಿತು ಅಂತಾರಾಷ್ಟ್ರೀಯ ಕ್ಷಮಾದಾನ ಸಂಸ್ಥೆ ತೀವ್ರವಾದ ಆತಂಕವನ್ನು ವ್ಯಕ್ತಪಡಿಸಿದೆ. ಬಾಲಕಿಯರ ಮೇಲೆ ಮಾನಸಿಕ ಹಾಗೂ ಲೈಂಗಿಕ ಹಿಂಸೆಯನ್ನು ನೀಡುತ್ತಿರುವವರಲ್ಲಿ ಶಿಕ್ಷಕರೆ ಮೊದಲು ಎಂಬ ಅಂಶವನ್ನು ತನ್ನ ಸಮೀಕ್ಷೆಯಲ್ಲಿ ಬಹಿರಂಗ ಪಡಿಸಿದೆ.

ವಿಶ್ವವಿದ್ಯಾನಿಲಯಗಳಲ್ಲಿ ಪಿಎಚ್.ಡಿಗಾಗಿ ಅಧ್ಯಯನ ಮಾಡುವ ವಿದ್ಯಾರ್ಥಿನಿಯರು ತಮ್ಮ ಗೈಡ್ ನೀಡುವ ಲೈಂಗಿಕ ದೌರ್ಜನ್ಯದ ವಿರುದ್ಧ ದನಿ ಎತ್ತಿ ಹಲವಾರು ಬಾರಿ ದೂರು ನೀಡಿದ ನಿದರ್ಶನಗಳು ನಮ್ಮ ಮುಂದಿವೆ.

ಸಂದರ್ಶನವೊಂದರಲ್ಲಿ ನೃತ್ಯ ಕಲಾವಿದೆ ಪ್ರತಿಭಾ ಪ್ರಹ್ಲಾದ್ ಅವರು ವಿದ್ಯಾಗುರುಗಳ ಲೈಂಗಿಕ ಕಿರುಕುಳದ ಬಗ್ಗೆ ಪ್ರಸ್ತಾಪಿಸಿದ್ದನ್ನೂ ಇಲ್ಲಿ ನೆನೆಯಬಹುದು.

ಕ್ರೀಡಾ ಕ್ಷೇತ್ರದಲ್ಲಿ ಹಾಗೂ ಸಿನಿಮಾ ಕ್ಷೇತ್ರದಲ್ಲಿ ನಡೆಯುವ ಲೈಂಗಿಕ ದೌರ್ಜನ್ಯದ ಪ್ರಕರಣಗಳನ್ನು ಸುಲಭವಾಗಿ ಮುಚ್ಚಿ ಹಾಕಲಾಗುತ್ತದೆ. ಟೆನ್ನಿಸ್ ಆಟದಲ್ಲಿ ಅಪಾರವಾದ ಸಾಧನೆ ಮಾಡಬೇಕೆಂಬ ಮಹತ್ವಾಕಾಂಕ್ಷೆಯನ್ನು ಹೊಂದಿದ್ದ ಹದಿನಾಲ್ಕು ವರ್ಷದ ರುಚಿತಾಳ ಕನಸನ್ನು ಹೊಸಕಿ ಹಾಕಿತ್ತು ಹಿರಿಯ ಪೊಲೀಸ್ ಅಧಿಕಾರಿಯ ಕಾಮುಕ ಚಪಲ. ಆತ ನೀಡಿದ ಹಿಂಸೆಯಿಂದಾಗಿ ತನ್ನ ಕುಟುಂಬಕ್ಕೆ ಆದ ಅವಮಾನವನ್ನು ಸಹಿಸಲಾರದೇ ರುಚಿತಾ ಆತ್ಮಹತ್ಯೆ ಮಾಡಿಕೊಂಡಳು.

ಒಂದು ಕಡೆ ಮಹಿಳೆಯರ ಹಕ್ಕು ಬಾಧ್ಯತೆಗಳ ರಕ್ಷಣೆಗಾಗಿ ಕಾನೂನುಗಳನ್ನು ಜಾರಿಗೆ ತರುತ್ತಿರುವುದರ ಜೊತೆಗೆ ಮಹಿಳೆಯರ ಮೇಲೆ ನಡೆಯುತ್ತಿರುವ ಹಿಂಸೆಯ ಸ್ವರೂಪ ಹಾಗೂ ಹಿಂಸೆಯ ಪ್ರಮಾಣವು ಹೆಚ್ಚುತ್ತಿರುವುದು ಆಘಾತಕಾರಿ ಅಂಶವಾಗಿದೆ. ನ್ಯಾಷನಲ್ ಕ್ರೈಮ್ ರೆಕಾರ್ಡ್ ಬ್ಯೂರೋದ ಪ್ರಕಾರ ಭಾರತದಲ್ಲಿ 2006ರಲ್ಲಿ 36,500 ಲೈಂಗಿಕ ಕಿರುಕುಳದ ಕೇಸುಗಳು ದಾಖಲಾಗಿವೆ. 2007ರಲ್ಲಿ 835 ಲೈಂಗಿಕ ಕಿರುಕುಳದ ಪ್ರಕರಣಗಳು ದೆಹಲಿಯಲ್ಲಿಯೇ ದಾಖಲಾಗಿವೆ. ಮಹಿಳೆಯರು ಸದಾ ಭಯದ ಒತ್ತಡದಲ್ಲಿ ಓಡಾಡುವ ಪರಿಸ್ಥಿತಿ ದೆಹಲಿಯಲ್ಲಿ ಉಂಟಾಗಿದೆ. ಇಷ್ಟು ಪ್ರಕರಣಗಳು ದಾಖಲಾಗಿದ್ದರೂ ಶಿಕ್ಷೆಯ ಪ್ರಮಾಣ ಶೇ 30ರಷ್ಟು ಮಾತ್ರ. ಕರ್ನಾಟಕದಲ್ಲಿ ಶಿಕ್ಷೆಯ ಪ್ರಮಾಣ ಶೇ 6ರಷ್ಟು!

ಈ ಮೇಲಿನ ಕೆಲವು ಪ್ರಕರಣಗಳಲ್ಲಿ ಲೈಂಗಿಕ ದೌರ್ಜನ್ಯಕ್ಕೆ ಒಳಗಾದ ಮಹಿಳೆಯರು ಸಶಕ್ತ ಮಹಿಳೆಯರು. ಇಂತಹ ಅಧಿಕಾರ ಹೊಂದಿದ ಸಶಕ್ತ ಮಹಿಳೆಯರ ಪರಿಸ್ಥಿತಿಯೇ ಹೀಗಿದ್ದರೆ, ಮನೆಯೊಳಗಿರುವ ಬಡತನದ ಬೇಗೆಯಲ್ಲಿ ಬೇಯುವ, ಹಿಂದುಳಿದ ಜಾತಿ ವರ್ಗಗಳಿಗೆ ಸೇರಿದ ಅನಕ್ಷರಸ್ಥ ಮಹಿಳೆಯರ ಗತಿಯೇನು? ಲೈಂಗಿಕ ದೌರ್ಜನ್ಯದ ಪ್ರಕರಣಗಳು ಬೆಳಕಿಗೆ ಬರದೇ ಇರುವುದೇ ಹೆಚ್ಚು. ಕುಟುಂಬದ ಗೌರವ, ಮರ್ಯಾದೆ, ಮುಂತಾದವುಗಳನ್ನು ಪುರುಷಪ್ರಧಾನ ವ್ಯವಸ್ಥೆ ನಿರೀಕ್ಷಿಸುವುದು ಮಹಿಳೆಯಿಂದ, ಹಾಗಾಗಿ ಇವುಗಳನ್ನು ಮುಚ್ಚಿ ಹಾಕಲಾಗುತ್ತದೆ. ಬೆಳಕಿಗೆ ಬಂದ ಅಥವಾ ನ್ಯಾಯ ಪಡೆಯಲು ಹೋರಾಟ ನಡೆಸಿದ ಸಂದರ್ಭದಲ್ಲಿ ಮಹಿಳೆಯರಲ್ಲೇ ತಪ್ಪು ಹುಡುಕಿ, ಅವರ ಚಾರಿತ್ರ್ಯವಧೆ ಮಾಡಿ, ಆಕೆಯ ವ್ಯಕ್ತಿತ್ವವನ್ನು ಸಂಪೂರ್ಣವಾಗಿ ಕುಸಿಯುವಂತೆ ಮಾಡಲಾಗುತ್ತದೆ. ರೂಪನ್‌ಬಜಾಜ್ ಅವರ ಪ್ರಕರಣದಲ್ಲಿ ಉನ್ನತಸ್ಥಾನದಲ್ಲಿದ್ದ ತಂದೆ ಹಾಗೂ ಗಂಡನ ಬೆಂಬಲ ಆಕೆಗೆ ಇದ್ದುದರಿಂದ ಆಕೆ ಸುಪ್ರೀಂ ಕೋರ್ಟ್ ಮೆಟ್ಟಿಲೇರಿ ನ್ಯಾಯ ಪಡೆಯಲು ಸಾಧ್ಯವಾಯಿತು.

ಅಧಿಕಾರ ಹಾಗೂ ಪುರುಷಪ್ರಧಾನ ಮೌಲ್ಯಗಳು ಜೊತೆ ಜೊತೆಗೇ ಸೇರುವುದರಿಂದ ದೂರು ನೀಡಿದ ಹಂತದಿಂದಲೇ ಮಹಿಳೆ ಲಿಂಗತಾರತಮ್ಯಕ್ಕೆ ಒಳಗಾಗುತ್ತಾಳೆ. ಬಹುಪಾಲು ಪೊಲೀಸ್ ಠಾಣೆಗಳಲ್ಲಿ 'ತಾಂತ್ರಿಕ ದೋಷ'ಗಳನ್ನು ಪ್ರಾಥಮಿಕ ಹಂತದಲ್ಲಿ ಉದ್ದೇಶಪೂರ್ವಕವಾಗಿ ಸೃಷ್ಟಿಸಲಾಗುವುದು. ಇಂತಹ ಸಂದರ್ಭದಲ್ಲಿ ಭ್ರಷ್ಟಾಚಾರ, ಹಣ, ಜಾತಿ, ರಾಜಕೀಯ ವ್ಯಕ್ತಿಗಳ ಬೆಂಬಲ 'ಎಲ್ಲವೂ' ಕೆಲಸ ಮಾಡುತ್ತವೆ. ಪುರುಷ ಪ್ರಧಾನ ಸಮಾಜದ ಮೌಲ್ಯಗಳು ಸಲೀಸಾಗಿ ಆರೋಪಗಳನ್ನು ಆಕೆಯ ವಿರುದ್ಧವೇ ತಿರುಗಿಸಿ, ಇನ್ನಷ್ಟು ಕುಗ್ಗುವಂತೆ ಮಾಡಿ, ದೂರು ನೀಡಿದ್ದೇ ತಪ್ಪಾಯಿತೇನೊ ಎನ್ನುವಂತಹ ಅಮಾನುಷ ವಾತಾವರಣವನ್ನು ಸೃಷ್ಟಿ ಮಾಡುತ್ತವೆ.

ಇಂದು ಮಹಿಳೆಯರು ಲೈಂಗಿಕ ದೌರ್ಜನ್ಯದ ವಿರುದ್ಧ ದನಿ ಎತ್ತುವಷ್ಟು ನೈತಿಕ ಸ್ಥೈರ್ಯವನ್ನು ಪಡೆಯುತ್ತಿದ್ದಾರೆ. ಮಹಿಳಾ ಚಳವಳಿ ಹಾಗೂ ಸಂಘಟನೆಗಳು ಮಹಿಳೆಯರಲ್ಲಿ ಧೈರ್ಯವನ್ನು ತುಂಬಿವೆ. ಕೇವಲ ಬೆಳಕಿಗೆ ತರುವುದು, ದೂರು ದಾಖಲಿಸುವುದು ಮಾತ್ರವಲ್ಲದೇ, ಇಂತಹ ಪ್ರಕರಣಗಳಲ್ಲಿ ನಿರಂತರವಾಗಿ ಮಹಿಳೆಯನ್ನು ಬೆಂಬಲಿಸಬೇಕಾಗುತ್ತದೆ. ಕಾನೂನಿನಲ್ಲಿರುವ ಮಿತಿಗಳ ದುರ್ಬಳಕೆಯ ವಿರುದ್ಧ ಸಾರ್ವಜನಿಕ ಚರ್ಚೆ ನಡೆಸಿ ಅವುಗಳ ತಿದ್ದುಪಡಿಗೆ ಪ್ರಯತ್ನಿಸಬೇಕಾಗುತ್ತದೆ. ಮನೆಯವರು, ನೆರೆ ಹೊರೆಯವರು, ಸಹೋದ್ಯೋಗಿಗಳು, ಮಹಿಳಾ ಸಂಘಟನೆಗಳು ಬೆಂಬಲ ನೀಡಿ ಆಕೆಯಲ್ಲಿ ನೈತಿಕ ಸ್ಥೈರ್ಯವನ್ನು ತುಂಬಬೇಕಾಗಿದೆ.

* * *

'ನಮ್ಮ ಮಾನಸ' ಪತ್ರಿಕೆಯನ್ನು ಗುರುತಿಸಿ ಮುಂಬಯಿಯ 'ಪಾಪ್ಯುಲೇಷನ್ ಫಸ್ಟ್' ಸಂಸ್ಥೆಯು ಪ್ರಶಸ್ತಿಯನ್ನು ಘೋಷಿಸಿತು. ಕೆಲವು ತಾತ್ತ್ವಿಕ ಕಾರಣಗಳಿಗಾಗಿ ಮಾನಸ ಈ ಪ್ರಶಸ್ತಿಯನ್ನು ಸ್ವೀಕರಿಸಿಲ್ಲ. ಸಾಧ್ಯವಾದರೆ ಆ ವಿವರಗಳನ್ನು ಮುಂದಿನ ಸಂಚಿಕೆಯಲ್ಲಿ ತಿಳಿಸುತ್ತೇವೆ. ಆದರೆ ಇಂಥ ಪ್ರಶಸ್ತಿಗೆ ಪತ್ರಿಕೆಯನ್ನು ಗುರುತಿಸಿದ ಸಲಹಾ ಮಂಡಳಿಗೆ, ಸೂಚಿಸಿದ ಮಹನೀಯರಿಗೆ ನಮ್ಮ ಕೃತಜ್ಞತೆಗಳು ಸಲ್ಲುತ್ತವೆ.

* * *

'ನಮ್ಮ ಮಾನಸ' ಮೆಚ್ಚಿ ಹಲವು ಪತ್ರಗಳು, ಮಾತುಗಳು ಬಂದಿವೆ. ಎಲ್ಲರ ಸಹಕಾರಕ್ಕೆ ವಂದನೆಗಳು. ಜಾಹಿರಾತು ನೀಡಿ ಸಹಕರಿಸಿರುವ ವಾರ್ತಾ ಇಲಾಖೆಯ ಆಯುಕ್ತರಾದ ಕೆ.ವಿ.ಆರ್. ಠಾಗೂರ್ ಮತ್ತು ಸಿಬ್ಬಂದಿಯವರಿಗೆ ನಮ್ಮ ವಿಶೇಷ ಕೃತಜ್ಞತೆಗಳಿವೆ.

# ಒಂದು ನೂರು ವರ್ಷಗಳ ಹೋರಾಟ

● *ನೀಲಾಂಜನ ಬಿಸ್ವಾಸ್*

**ಮಾ**ರ್ಚ್ 8ರ ಬಗ್ಗೆ ಒಂದು ರೋಚಕತೆ ಇಲ್ಲದೇ ನಾನು ಕೆಲಸ ಮಾಡುತ್ತಿದ್ದ ಸಾಫ್ಟ್‌ವೇರ್ ಕಾರ್ಪೊರೇಟ್‌ನಲ್ಲಿ ಯಾವ ವರ್ಷವನ್ನೂ ಕಳೆದದ್ದಿಲ್ಲ. ಮಹಿಳಾ ಉದ್ಯೋಗಿಗಳಿಗೆ ಅವರ ಹೆಣ್ತನವನ್ನು ಅಪ್ಪಿಕೊಳ್ಳುವಂತೆ ಒತ್ತಾಯಿಸಲಾಗುತ್ತಿತ್ತು. ಬಹಳಷ್ಟು ಮಹಿಳೆಯರು ಸೀರೆ ಉಟ್ಟು ಬರುತ್ತಿದ್ದರು. (ಸಾಂಪ್ರದಾಯಿಕವಾಗಿ ಕಾಣುವುದಕ್ಕೆ) ಜೊತೆಗೆ ಅಲಂಕಾರ (ಆಧುನಿಕತೆಯ ಸ್ಪರ್ಶಕ್ಕೆ). ಮೊದಲ ಮಾಮೂಲಿ ಸಂದೇಶವಿರುತ್ತಿದ್ದುದು ಮಾನವ ಸಂಪನ್ಮೂಲ ಅಧಿಕಾರಿಗಳಿಂದ: 'ಮಹಿಳಾ ದಿನದ ಶುಭಾಶಯಗಳು!' ಈ ಸಂದೇಶ ಕೆಂಪು ಗುಲಾಬಿ ಹೂವಿನ ವೃತ್ತದಲ್ಲಿ ಕಂಗೊಳಿಸುತ್ತಿತ್ತು. ಮಾರ್ಚ್ 8 ಎಂದರೆ 'ಹೆಣ್ತನ'ವನ್ನು ಆಚರಿಸುವ ದಿನ ಎಂಬುದರ ಬಗ್ಗೆ ಅಲ್ಲಿದ್ದ ಮಹಿಳಾ ಸಹೋದ್ಯೋಗಿಗಳಿಗೆ ಯಾವುದೇ ಸಂಶಯವೂ ಇರಲಿಲ್ಲ.

ಹೆಣ್ತನದ ಆಚರಣೆ! ನಿಜವೆನ್ನೋಣವೇ? 20ನೆಯ ಶತಮಾನದ ಅಂಚಿನಲ್ಲಿ ನ್ಯೂಯಾರ್ಕ್‌ನ ಉಡುಪು ಕಾರ್ಖಾನೆಯ ಉದ್ಯೋಗಿಗಳಿಗೆ – ಅವರು ಹೆಣ್ಣಾಗಿ ಆಕಸ್ಮಿಕವಾಗಿ ಹುಟ್ಟಿದ್ದಕ್ಕೆ ಅವರ ಹೋರಾಟಗಳು ಜಾಗತೀಕರಣದ ಆಚರಣೆಗೆ ಶಾಪ ಎಂದು ಯಾರಾದರೂ ಹೇಳಿದ್ದರೆ ಅವರು ಹೌಹಾರುತ್ತಿದ್ದರು. ನಿಜವೆಂದರೆ ಮಾರ್ಚ್ 8 ಹೆಣ್ತನದ ಆಚರಣೆಯ ವಿಚಾರವಲ್ಲ, ಆದರೆ ಇದು ಹೆಣ್ಣಿನ ನಿರಂತರ ಶೋಷಣೆಯ ವಿಚಾರವಾಗಿದೆ.

ಒಂದು ಕ್ಷಣ ಇತಿಹಾಸವನ್ನು ನೆನಪಿಸಿಕೊಳ್ಳೋಣ. 1908ರ ಮಾರ್ಚ್‌ನ ವಸಂತಕಾಲದ ಬೆಳಿಗ್ಗೆ ವಲಸೆ ಬಂದ ಹೆಂಗಸರು ಉದ್ದವಾದ ಸಾಲಿನಲ್ಲಿ ನಿಂತಿದ್ದನ್ನು ಕಲ್ಪಿಸಿಕೊಳ್ಳಿ. ನ್ಯೂಯಾರ್ಕ್‌ನ ಬೀದಿಗಳಲ್ಲಿ ಅವರು ನಡೆಯುತ್ತಿದ್ದರು. ಅಳುತ್ತಿದ್ದ ಅವರ ಮಕ್ಕಳನ್ನು ಸಕ್ಕರೆ ನೀರಿನ ಬಾಟಲಿಗಳಿಂದ ಸುಮ್ಮನಾಗಿಸುತ್ತಿದ್ದರು. ಮೆರವಣಿಗೆ ಹೋಗುತ್ತಿದ್ದ ಅವರ ಮುಷ್ಠಿಗಳು ಗಾಳಿಯಲ್ಲಿದ್ದವು. ಅವರ ಕಣ್ಣುಗಳು ಕೋಪದಿಂದ ಮತ್ತು ಆಸೆಯಿಂದ ಉರಿಯುತ್ತಿದ್ದವು. ಅವರು ಕೂಗುತ್ತಿದ್ದ ಘೋಷಣೆಗಳೇನು? ಈ ನ್ಯೂಯಾರ್ಕ್‌ನ ಮಹಿಳಾ ಉದ್ಯೋಗಿಗಳು ಸೂಜಿದಾರದ ಕಾರ್ಖಾನೆಯನ್ನು ಮುಚ್ಚಿಸಿದ್ದರು. 70 ಗಂಟೆಗಳ ವಾರದ ಕೆಲಸಕ್ಕೆ ಒಂದು ಡಾಲರ್‌ಗಿಂತ ಕಡಿಮೆಯ ಆರುಬಿಲ್ಲೆ ಒಯ್ಯಬೇಕೇ? ಎಂದು ಪ್ರಶ್ನಿಸಿ ಇವರು ಪ್ರತಿಭಟಿಸುತ್ತಿದ್ದರು. ಕಡಿಮೆ ಕೆಲಸ, ಒಳ್ಳೆಯ ಕೆಲಸದ ಸ್ಥಿತಿ, ಮಕ್ಕಳು ಬದುಕುಳಿಯುವುದಕ್ಕೆ ಹೆಚ್ಚಿಗೆ ಸಂಬಳ ಇವು ಅವರ ಬೇಡಿಕೆಯಾಗಿದ್ದವು. ಕುದುರೆಗಳ ಗರ ಗರ ಸದ್ದು, ದೊಣ್ಣೆ ಬೀಸುತ್ತಿದ್ದ ಪೊಲೀಸರು ಭಯಂಕರವಾದ ಕಾನೂನನ್ನು ನೆನಪಿಸುತ್ತಿದ್ದವು. ಮೆರವಣಿಗೆ ಹೋಗುತ್ತಿರುವವರನ್ನು ಹೊಡೆಯಲು ಇವರು ಸಿದ್ಧರಾಗಿದ್ದರು. ಉಡುಪು ಕಾರ್ಖಾನೆಯ ಮಹಿಳೆಯರು ಬದಲಾಯಿಸಲು ಪ್ರಯತ್ನಿಸುತ್ತಿದ್ದ ಶೋಚನೀಯ ಸ್ಥಿತಿಗೇ ಅವರನ್ನು ತಳ್ಳಲು ಪೊಲೀಸರು ಪ್ರಯತ್ನಿಸುತ್ತಿದ್ದರು.

ಇದಾದ ಎರಡುವರ್ಷದಲ್ಲಿ ಹಾಗೂ ಇತರ ಸಶಕ್ತ ಉಡುಪು ಕಾರ್ಖಾನೆಯ ಮಹಿಳಾ ಉದ್ಯೋಗಿಗಳ ಹೋರಾಟದಿಂದಾಗಿ 1910ರಲ್ಲಿ ಕೋಪನ್ ಹೇಗನ್‌ನಲ್ಲಿ ಸಮಾಜವಾದಿ ಕಾಂಗ್ರೆಸ್ ಮಾರ್ಚ್ 8ನ್ನು ಅಂತರರಾಷ್ಟ್ರೀಯ ಮಹಿಳಾದಿನವೆಂದು ಆಚರಿಸಲು ನಿರ್ಧರಿಸಿತು. ಇದಕ್ಕಾಗಿ ಒಂದು ಸ್ಮಾರಕ ಭಿತ್ತಿಯನ್ನು ಸ್ಥಾಪಿಸಲಾಯಿತು. ಇದರಲ್ಲಿ ನೀಡಿದ ಸಂದೇಶವೆಂದರೆ – ಇದು ಮಹಿಳೆಯ ಸ್ವಾತಂತ್ರ್ಯಕ್ಕೆ ಇರುವ ಉದ್ದವಾದ ಹಾಗೂ ಅಂಕುಡೊಂಕಾದ ದಾರಿ. ಇಲ್ಲಿಂದ ಮುಂದೆ ಯಾವುದೇ ಭೂಪಟವಿರುವುದಿಲ್ಲ. ಚರಿತ್ರೆಯಿಂದ ಕೆಲವು ಸೂಚನೆಗಳನ್ನು ಮಾತ್ರ ನಾವು ತೆಗೆದುಕೊಳ್ಳಬಹುದು. ಅಂತ್ಯವೇ ಇಲ್ಲದಂತೆ ಕಾಣುವ ದಾರಿಯಲ್ಲಿ ಸಾವಿರಾರು ಮಹಿಳೆಯರು ನಡೆಯತೊಡಗಿದ್ದಾರೆ. ಒಬ್ಬರ ಬದುಕಿನ ಶೋಚನೀಯ ಪರಿಸ್ಥಿತಿಯನ್ನು ಹೋರಾಡುವ ಸಾಮರ್ಥ್ಯ, ಇತರ ಸಹೋದರಿಯರ ಹೋರಾಟದ ಜೊತೆ ಒಂದು ಸಾಮಾನ್ಯ ಅಂಶವನ್ನು ಕಂಡುಕೊಳ್ಳುವ ಅರಿವು ಇವುಗಳು ಒಂದು ಪವಾಡವೆಂದು ಹೇಳಬೇಕು. ಮಾರ್ಚ್ 8, ಈ ಕಾರ್ಮಿಕ ಮಹಿಳೆಯರ ಅಳಿಸಲಾಗದ ಸ್ಫೂರ್ತಿ ಹಾಗೂ ಮಿಲಿಟೆನ್ಸಿಯನ್ನು ಸಂಕೇತಿಸುತ್ತದೆ.

ಉಡುಪು ಕಾರ್ಖಾನೆಯ ಮಹಿಳೆಯರ ಹೋರಾಟಗಳು ನಡೆದು 100 ವರ್ಷಗಳು ಕಳೆದಿದ್ದರೂ ಪ್ರಪಂಚದ ಇನ್ನೊಂದು ಭಾಗದ ಉಡುಪು ಕಾರ್ಖಾನೆಯ ಮಹಿಳಾ ಉದ್ಯೋಗಿಗಳ ಜೀವನದಲ್ಲಿ ಆಗಿರುವ ಬದಲಾವಣೆ ಅತ್ಯಂತ ಕಡಿಮೆ. ಜಾಗತೀಕರಣಗೊಳ್ಳುತ್ತಿರುವ ಬೆಂಗಳೂರು ನಗರದಲ್ಲಿ ಇದನ್ನು ನೋಡಬಹುದಾಗಿದೆ.

ತುಂಡು ತುಂಡಾಗಿ ನಡೆಯುವ ಕೆಲಸದ ರಚನೆ (out sourcing) ಬೆಂಗಳೂರಿನ ಬದುಕಿನ ಜೀವನಾಡಿಯಾಗಿದೆ. ಅಭಿವೃದ್ಧಿ ಹೊಂದುತ್ತಿರುವ ರಸ್ತೆಗಳು ಹಾಗೂ ಫ್ಲೈಓವರ್‌ಗಳು out sourceನ ಹೆಚ್ಚು ಹೆಚ್ಚು ಸೇವೆ ಹಾಗೂ ವಸ್ತುಗಳಿಗೆ ಅವಕಾಶ ಮಾಡಿಕೊಡುತ್ತಿವೆ. ಬೆಂಗಳೂರಿನ out sourcing ಎರಡು ಹಂತದಲ್ಲಿ ನಡೆಯುತ್ತಿದೆ. ಇವು ಎರಡು ಪ್ರಪಂಚವೆಂದೇ ನಾವು ತಿಳಿಯಬಹುದಾಗಿದೆ. ಜಗಜಗಿಸುವ ಸಾಫ್ಟ್‌ವೇರ್ ಜಗತ್ತಿನ out sourcing ನಗರದ ಹೆಮ್ಮೆಯ ಸಂಗತಿಯಾಗಿದೆ. ಇನ್ನೊಂದು ಉಡುಪು ಕೈಗಾರಿಕೆಯ out source ಪ್ರಪಂಚ. ಈ ಜಗತ್ತಿನ ಬಗ್ಗೆ ನಗರ ಯೋಚಿಸುವುದೇ ಇಲ್ಲ.

5 ಲಕ್ಷ ಜನ ಉದ್ಯೋಗಿಗಳು ಬೆಂಗಳೂರಿನ ಸುತ್ತ ಮುತ್ತಲಿನ ಉಡುಪು ಕಾರ್ಖಾನೆಗಳಲ್ಲಿ ಕೆಲಸ ಮಾಡುತ್ತಾರೆ. ಕರ್ನಾಟಕದ ಅತ್ಯಂತ ದೊಡ್ಡ ಕೈಗಾರಿಕೋದ್ಯಮ ಎಂದರೆ ಉಡುಪು ತಯಾರಿಕಾ ಕಾರ್ಖಾನೆ.

ಬೆಂಗಳೂರಿನ ಉಡುಪು ಕಾರ್ಖಾನೆಯಲ್ಲಿನ ಸ್ಥಿತಿ–ಗತಿಗಳು ಒಂದು ನೂರು ವರ್ಷದ ಹಿಂದೆ ನ್ಯೂಯಾರ್ಕ್‌ನಲ್ಲಿದ್ದ ಉಡುಪು ಕಾರ್ಖಾನೆಯ ಸ್ಥಿತಿ–ಗತಿಗಳನ್ನು ಹೋಲುತ್ತವೆ. 19ನೆಯ ಶತಮಾನದ ನ್ಯೂಯಾರ್ಕ್‌ನಂತೆ ಬೆಂಗಳೂರಿನ ಉಡುಪು ಕಾರ್ಖಾನೆ 70%ನಷ್ಟು ಮಹಿಳಾ ಉದ್ಯೋಗಿಗಳನ್ನು ಹೊಂದಿದೆ. ನ್ಯೂಯಾರ್ಕ್‌ನ ಸೂಜಿದಾರದ ಕಾರ್ಖಾನೆಗಳಲ್ಲಿ ಇಟಲಿ ಹಾಗೂ ಯುರೋಪಿನಿಂದ ತಮ್ಮ ಬಡತನ ತಪ್ಪಿಸಿಕೊಳ್ಳಲಿಕ್ಕೋಸ್ಕರವೋ ಅಥವಾ ತಮ್ಮ ದೇಶದಿಂದ ಶಿಕ್ಷೆಯನ್ನು ತಪ್ಪಿಸಿಕೊಳ್ಳಲೋಸುಗವೋ – ವಲಸೆ ಬಂದ ಜ್ಯೂ–ಸಮುದಾಯದ ಮಹಿಳೆಯರು ಅಗ್ಗದ ಶ್ರಮಜೀವಿಗಳಾಗಿ ರೂಪುಗೊಂಡಿದ್ದರೆ, ಕರ್ನಾಟಕದ ಹಳ್ಳಿಗಾಡುಗಳಿಂದ – ಬೆಳೆಗಳ ನಾಶದಿಂದಾಗಿ ಪಾಪರ್ ಆದ ಮೊದಲ ಜನಾಂಗದ ವಲಸೆಗಾರರು ಬೆಂಗಳೂರಿನ ಉಡುಪು ಕಾರ್ಖಾನೆಯ ಮುಂದೆ ಕೆಲಸಕ್ಕಾಗಿ ಕ್ಯೂ ನಿಲ್ಲುತ್ತಿದ್ದಾರೆ.

ವಲಸೆಗಾರರಾಗುವ ಒತ್ತಡದಿಂದ ನಗರಕ್ಕೆ ಬಂದ ಈ ಮಹಿಳೆಯರು ಅಗ್ಗದ, ಶೋಚನೀಯ ಹಾಗೂ ದಮನಕ್ಕೊಳಗಾದ ಶ್ರಮಜೀವಿಗಳಾಗಿದ್ದಾರೆ. ಇವರು ವಾರ್ಷಿಕ 7000 ಕೋಟಿಯಷ್ಟು ನಿವ್ವಳ ಲಾಭವನ್ನು ಕರ್ನಾಟಕದ ಸಿದ್ಧ ಉಡುಪುಗಳ ಕೈಗಾರಿಕೆಗೆ ದೊರಕಿಸಿಕೊಡುತ್ತಾರೆ. ಉತ್ತಮ ಜೀವನ ಅರಸಿ ನಗರಕ್ಕೆ ವಲಸೆ ಬರುವ ಇವರು ಕಡುಬಡತನ ಹಾಗೂ ಶೋಚನೀಯ ಸ್ಥಿತಿಗಳಲ್ಲಿ ಕೆಲಸ ಮಾಡುತ್ತಾರೆ.

ತಮ್ಮ ನ್ಯೂಯಾರ್ಕ್ ಸಹೋದರಿಯರ ಹಾಗೆ, ಬೆಂಗಳೂರಿನ ಉಡುಪು ಕಾರ್ಖಾನೆಯ ಮಹಿಳೆಯರೂ ಕೂಡಾ ವಾರಕ್ಕೆ 60ರಿಂದ 70 ಘಂಟೆಗಳ ಕಾಲ ದುಡಿಯುತ್ತಾರೆ. ಅಗ್ಗದ ಸಂಬಳಕ್ಕೆ ಇವರು ದುಡಿಯುತ್ತಾರೆ. ಒಂದು

ಡಾಲರ್‌ಗಿಂತ ಕಡಿಮೆ ಅಂದಿನ ಸ್ಥಿತಿಯಾಗಿತ್ತು. ದಿನಕ್ಕೆ 100 ರೂಪಾಯಿಯಂತೆ ಇಂದಿನ ಇಲ್ಲಿನ ಉಡುಪು ಕಾರ್ಖಾನೆಯ ಮಹಿಳೆ ಗಳಿಸುತ್ತಾಳೆ. ಹೆಚ್ಚು ಅವಧಿಯ ಕೆಲಸಕ್ಕೆ ಸಂಬಳ ಅಪರೂಪ ಅಥವಾ ಸಂಪೂರ್ಣವಾಗಿ ಕೊಡುವುದಿಲ್ಲ. ಇತ್ತೀಚಿನ ಅಧ್ಯಯನವೊಂದರ ಪ್ರಕಾರ ಉಡುಪು ಕಾರ್ಖಾನೆಯಲ್ಲಿ ದುಡಿಯುವ ಮಹಿಳೆಯೊಬ್ಬಳ ಖರ್ಚು – ಬರಿಯ ಆಹಾರ, ಬಾಡಿಗೆ, ಶಿಕ್ಷಣ, ಔಷಧ, ಸಾರಿಗೆ ಇವುಗಳಿಗೆ ಒಂದು ದಿನಕ್ಕೆ 150 ರೂ ಆಗಿರುತ್ತದೆ. ಹಾಗಾಗಿ ವರ್ಷಕ್ಕೆ 24,000 ರೂಗಳ ಸಾಲ ಒಂದು ಕುಟುಂಬಕ್ಕೆ ಇರುತ್ತದೆ. ಬಹುತೇಕ ಕುಟುಂಬಗಳಲ್ಲಿ ಎರಡು ಅಥವಾ ಮೂರು ಜನರ ಆದಾಯದ ಮೇಲೆಯೇ ಜೀವನ ನಿರ್ವಹಣೆ ಸಾಗಬೇಕಾಗುತ್ತಿದೆ.

ಈ ಕೈಗಾರಿಕೆ ಕನಿಷ್ಠ ವೇತನದ ಕಲ್ಪನೆಯನ್ನೇ ಪರಿಹಾಸ್ಯ ಮಾಡುತ್ತದೆ. ಕನಿಷ್ಠ ವೇತನ ಕೊಡದಿರುವುದಷ್ಟೇ ಅಲ್ಲ, ಉಡುಪು ಕಾರ್ಖಾನೆ / ಕೈಗಾರಿಕೆಯ ಸಂಬಳದಲ್ಲಿ ಪರಿಷ್ಕರಣೆಯನ್ನು ಪ್ರಕಟಿಸಿದಾಗಲೆಲ್ಲಾ ಉಡುಪು ತಯಾರಿಕಾ ಸಂಘದವರು ತಡೆಯಾಜ್ಞೆಗೆ ನ್ಯಾಯಾಲಯಕ್ಕೆ ಮೊರೆ ಹೋಗುತ್ತಾರೆ. ಹಾಗಾಗಿ ಹಿಂದಿನ ವರ್ಷದ ಕನಿಷ್ಠ ವೇತನವೇ ಉಳಿದಿರುತ್ತದೆ. ಹಣದುಬ್ಬರಕ್ಕಾಗಿ ಸಣ್ಣ ಹೊಂದಾಣಿಕೆಯನ್ನು ಮಾತ್ರ ಮಾಡಲಾಗುತ್ತದೆ.

ಆದರೆ ಉತ್ಪಾದನೆಯ ಟಾರ್ಗೆಟ್ ಮೇಲೆ ಅಂತಹ ತಡೆಗಳೇನೂ ಇರುವುದಿಲ್ಲ. ನಿಮಿಷಗಳಲ್ಲಿ ಕತ್ತರಿಸುವುದು, ಟ್ರಿಮ್ ಮಾಡುವುದು,



ಕಾರ್ಯಾಚರಣೆ ಇವುಗಳೆಲ್ಲ ವೈಜ್ಞಾನಿಕ ಕಾಲ ಚಲನೆಯ ಅಧ್ಯಯನ ಶೀಲತೆಯನ್ನು ಆಧರಿಸಿಯೇ ನಡೆಯುತ್ತವೆ. ಉತ್ಪಾದನೆಯ ಗುರಿಗಳನ್ನು ರೂಪಿಸಲು ಇವುಗಳನ್ನೇ ಆಧಾರವಾಗಿ ಇಟ್ಟುಕೊಳ್ಳಲಾಗುತ್ತಿದೆ. ಉತ್ಪಾದನೆಯ ಗುರಿಗಳು ಮುಚ್ಚಿರುವುದನ್ನು ಋಜುವಾತು ಪಡಿಸುವುದಕ್ಕೋಸ್ಕರ ಕೆಲಸದ ಸ್ಥಳಗಳಲ್ಲಿ ಲೈಂಗಿಕ ಕಿರುಕುಳಗಳು, ಬಯ್ಗುಳು ಯಾಂತ್ರಿಕವಾಗಿ ನಡೆಯುತ್ತಲೇ ಇರುತ್ತವೆ. ಈ ಉತ್ಪಾದನೆಯ ಗುರಿಗಳನ್ನು ಮುಟ್ಟುವುದಕ್ಕೋಸ್ಕರ ಮಹಿಳೆಯರು ಊಟ ಮಾಡದೇ, ಶೌಚಾಲಯಗಳಿಗೂ ಹೋಗದೇ ದುಡಿಯುತ್ತಾರೆ. ಇದರಿಂದಾಗಿಯೇ ಭಯಂಕರವಾದ ಅನಾರೋಗ್ಯದ ಸಮಸ್ಯೆಗಳು ಇವರಲ್ಲಿ ಕಾಣಿಸಿಕೊಳ್ಳುತ್ತಿವೆ. ಬೆನ್ನು ನೋವು, ಪೈಲ್ಸ್, ಮೂತ್ರ ಕೋಶದ ನಾಳದ ತೊಂದರೆ, ಧೂಳು ಅಲರ್ಜಿ, ಸೋಂಕು, ಋತುಸ್ರಾವಚಕ್ರದಲ್ಲಿ ವ್ಯತ್ಯಯಗಳು ಕಂಡುಬರುತ್ತಿವೆ.

ಇತ್ತೀಚಿನ ದಿನಗಳಲ್ಲಿ ಬೆಂಗಳೂರಿನ ಉಡುಪು ಕಾರ್ಖಾನೆಗಳು ಅವರ ಅನೇಕ ತಪ್ಪುಗಳಿಗಾಗಿ ಯಾವಾಗಲೂ ಸುದ್ದಿಯಾಗುತ್ತಲೇ ಇವೆ. ನಾನು ಈ ಲೇಖನ ಬರೆಯುತ್ತಿರುವಾಗಲೇ ತುಮಕೂರು ರಸ್ತೆಯ ಎಂ.ಬಿ. ಅಪಾರೆಲ್ಸ್‌ನ ಕನಿಷ್ಠ 260 ಉದ್ಯೋಗಿಗಳು ಎರಡು ಇ.ಎಸ್.ಐ ಆಸ್ಪತ್ರೆಯಲ್ಲಿ ಮಲಗಿದ್ದಾರೆ. ಕೆಲಸದ ಸ್ಥಳದಲ್ಲಿ ನೀಡಲಾದ ಸೋಂಕಿನ ನೀರಿನಿಂದ ಅವರು ಗ್ಯಾಸ್ಟ್ರೋ ಎಂಟರಿಟೀಸ್‌ನಿಂದ ನರಳಿ ಆಸ್ಪತ್ರೆಗಳಿಗೆ ದಾಖಲಾಗಿದ್ದಾರೆ. ಉತ್ತರಹಳ್ಳಿಯ ಗೊಯಂಕಾ ಎಕ್ಸ್‌ಪೋರ್ಟ್‌ನಲ್ಲಿ ಕೆಮಿಕಲ್ ವಿಷಾನಿಲದಿಂದಾಗಿ 2004ರಲ್ಲಿ ಒಬ್ಬ ಉದ್ಯೋಗಿ ಮರಣ ಹೊಂದಿದ್ದಲ್ಲದೇ ಇನ್ನೂ ಕೆಲವರು ತಮ್ಮ ಜೀವನದ ಜೊತೆ ಹೋರಾಟ ನಡೆಸಿದ್ದರು. ಆದರೆ ಕಾರ್ಖಾನೆಯ ಮಾಲೀಕರು ಇದನ್ನೆಲ್ಲ ತಿರಸ್ಕರಿಸುವ ಮೂಲಕವೇ ಬಚಾವಾಗಿದ್ದರು.

ಕಳೆದ ಒಂದು ವರ್ಷದಲ್ಲಿ ಉಡುಪು ಕಾರ್ಖಾನೆಯ ಅನೇಕ ಮಹಿಳಾ ಕಾರ್ಮಿಕರು ಅಕಾಲ ಮರಣ ಹೊಂದಿದ್ದಾರೆ/ಅನೇಕರು ಆತ್ಮಹತ್ಯೆ ಮಾಡಿಕೊಂಡಿದ್ದಾರೆ. 2007ರ ಫೆಬ್ರವರಿಯಲ್ಲಿ ಒಂಟಿ ತಾಯಿ 25 ವರ್ಷದ ಅಮ್ಮು ಕಾರ್ಖಾನೆಯ ಶೌಚಾಲಯದಲ್ಲಿಯೇ ನೇಣು ಹಾಕಿಕೊಂಡಿದ್ದಾಳೆ. ಆಕೆಯ ಮೇಲ್ವಿಚಾರಕನಿಂದ ನಡೆದ ಕಿರುಕುಳಗಳೇ ಇದಕ್ಕೆ ಕಾರಣವೆಂದು ಹೇಳಲಾಗುತ್ತಿದೆ. ಸೆಪ್ಟೆಂಬರ್ 19, 2007ರಂದು 39 ವರ್ಷದ ಪದ್ಮಾವತಿಯು ಕಾರ್ಖಾನೆಯ ಗೇಟ್ ಮುಂದೆಯೇ ಸತ್ತು ಬಿದ್ದಳು. ಕೆಲಸದ ಸ್ಥಳದಲ್ಲಿ ಆಕೆಯ ಮೇಲ್ವಿಚಾರಕರಿಂದಲೇ ಕಿರುಕುಳಕ್ಕೊಳಗಾದ 18 ವರ್ಷದ ರೇಣುಕ ಅಕ್ಟೋಬರ್ 12, 2007ರಂದು ಪೀಣ್ಯಾದ ತನ್ನ ಮನೆಯಲ್ಲಿ ಆತ್ಮಹತ್ಯೆ ಮಾಡಿಕೊಂಡಳು.

ನ್ಯೂಯಾರ್ಕ್‌ನ ಹೋರಾಟವನ್ನು ಅನೇಕ ಬಾರಿ ಹಿಂಸೆಯಿಂದ ತಡೆಯಲಾಗುತ್ತಿತ್ತು. ಕ್ಲಾರಾ ಲೆಮ್‌ಲಿಚ್ 1909ರಲ್ಲಿ ನ್ಯೂಯಾರ್ಕ್ ನಲ್ಲಿ ಶರ್ಟ್‌ವೇಸ್ಟ್ ಕಾರ್ಮಿಕರ ದೊಡ್ಡ ಹೋರಾಟವೊಂದಕ್ಕೆ ನಾಯಕತ್ವ ವಹಿಸಿದ್ದರು. ಇವರಿಗೆ ಹೊಡೆದು ಬಂಧಿಸಲಾಗಿತ್ತು. ಬೆಂಗಳೂರಿನ ಉಡುಪು ಕಾರ್ಖಾನೆಯಲ್ಲಿ ಶೋಷಣೆಯನ್ನು ವಿರೋಧಿಸುವವರ ಸ್ಥಿತಿ ಇವರಿಗಿಂತ ಏನೂ ಭಿನ್ನವಾಗಿಲ್ಲ. ಬೆಂಗಳೂರಿನ ಉಡುಪು ಹಾಗೂ ಟೆಕ್ಸ್‌ಟೈಲ್ಸ್ ಕಾರ್ಮಿಕರ ಸಂಘದ (GATWU) ಕಾರ್ಯದರ್ಶಿಯಾಗಿರುವ ವಿ.ಪಿ.ರುಕ್ಮಿಣಿಯು ಕಾರ್ಮಿಕರಿಗೆ ಅವರ ಹಕ್ಕುಗಳ ಬಗ್ಗೆ ತಿಳಿವಳಿಕೆ ನೀಡಿದ್ದಕ್ಕಾಗಿ ಟೆಕ್ಸ್‌ಪೋರ್ಟ್ ಕ್ರಿಯೇಷನ್ಸ್ ಲಿಮಿಟೆಡ್‌ನ ಉಡುಪು ಕಾರ್ಖಾನೆಯಿಂದ ಅಮಾನತ್ತುಗೊಳಿಸಲಾಗಿದೆ. ಲೆಕ್ಕವಿಲ್ಲದಷ್ಟು ಉಡುಪು ಕಾರ್ಖಾನೆಯ ಮಹಿಳೆಯರು ಅಮಾನತ್ತು ಎದುರಿಸುತ್ತಿದ್ದಾರೆ. ನ್ಯಾಯಾಲಯದ ತಡೆಯಾಜ್ಞೆಗಳಿಂದ ಹೋರಾಟಗಾರರು ಹಾಗೂ ಒಗ್ಗಟ್ಟನ್ನು, ಸಹಕಾರವನ್ನು ತೋರುತ್ತಿರುವ ಅಂತರರಾಷ್ಟ್ರೀಯ ಕ್ಯಾಂಪೈನ್‌ಗಳೂ ಕೂಡಾ ಹಿಮ್ಮೆಟ್ಟುವಂತೆ ಮಾಡಲಾಗುತ್ತದೆ. ಶಾಂತಿಯುತವಾಗಿ ನಡೆಯುವ ಶೋಕ ಸಂದೇಶದ ಸಭೆಗಳಲ್ಲೂ ಕೂಡಾ ಬಾಡಿಗೆ ಗೂಂಡಾಗಳಿಂದ ಹೊಡೆಸಲಾಗುತ್ತದೆ. ಇದನ್ನು ಪೊಲೀಸರು ನಿಂತು ನೋಡುತ್ತಲೇ ಇರುತ್ತಾರೆ.

ಉಡುಪು ಕಾರ್ಖಾನೆಯಲ್ಲಿ ದುಡಿಯುವ ಮಹಿಳೆಯರಿಗೆ ನೂರು ವರ್ಷಗಳ ಹೋರಾಟದ ಇತಿಹಾಸವಿದೆ. ಆದರೆ ಏನು ಬದಲಾಗಿದೆ? ಬಹುಶಃ ಕಳೆದ ಶತಮಾನದಲ್ಲಿ ಇರದ ಅರಿವು, ಜಾಗ್ರತೆ, ತಿಳಿವಳಿಕೆ ಇವತ್ತು ಇದೆ. ಪ್ರಾಪಂಚಿಕ ಮಟ್ಟದಲ್ಲಿ ಅನ್ಯಾಯದ ಬಗ್ಗೆ, ಮಾನವ ಹಕ್ಕುಗಳ ಬಗ್ಗೆ ಮಹಿಳೆಯರಲ್ಲಿ ಜಾಗೃತಿ ಇದೆ. ಬೆಂಗಳೂರಿನ ಉಡುಪು ಕಾರ್ಖಾನೆಯ ಕಾರ್ಮಿಕರು GATWU (garment and textile workers union)ನಿಂದ ಸಂಘಟಿತರಾಗುತ್ತಿದ್ದಾರೆ. ಇವರಿಗೆ ರಾಷ್ಟ್ರೀಯ ಹಾಗೂ ಅಂತರರಾಷ್ಟ್ರೀಯ ಮಟ್ಟದಲ್ಲಿನ ನ್ಯಾಯಬದ್ಧ ಸಂಘಟನೆಗಳಿಂದ ಹಾಗೂ ಹೋರಾಟಗಳಿಂದ ಬೆಂಬಲವೂ ಕೂಡಾ ಇದೆ.

ಮಾರ್ಚ್ 8 ಒಗ್ಗಟ್ಟು ಹಾಗೂ ಸಹೋದರಿತ್ವದ ಮೇಲೆ ಅವಲಂಬಿತವಾಗಿರುವ ಒಗ್ಗೂಡಿದ ಪ್ರತಿಭಟನೆಯನ್ನು ಆಚರಿಸುವ ದಿನ. ಬೆಂಗಳೂರಿನ ಉಡುಪು ಕಾರ್ಖಾನೆಯ ಕಾರ್ಮಿಕರು ಇತಿಹಾಸದಿಂದ ಸ್ಥೈರ್ಯ ಹಾಗೂ ಆತ್ಮಬಲವನ್ನು ಹೊಂದಬಹುದಾಗಿದೆ. ಅವರು ಶಕ್ತಿಯುತ ಮತ್ತು ಚಿರಂತನವಾದ ಇತಿಹಾಸದ ವಾರಸುದಾರಿಕೆಯ ದೀವಿಗೆಯನ್ನು ಹಿಡಿದವರು ಹಾಗೂ ಇಂದಿನ ಮಹಿಳೆಯರ ಹೋರಾಟಗಳ ಜೀವಂತ ಇತಿಹಾಸವನ್ನು ಬರೆಯುತ್ತಾರೆ.

*(ಅನು: ಚಂಪಾ)*

# 'ಸೆಕ್ಸ್ ಬರೀ ಪುರುಷನ ಅಗತ್ಯ ಮಾತ್ರವಲ್ಲ'

## ಲೈಂಗಿಕ ಕಾರ್ಯಕರ್ತೆ ನಳಿನಿ ಜಮೀಲಾ

*ಎರಡು ಮಕ್ಕಳನ್ನು ಸಲಹಲು ಪ್ರತಿದಿನ 5 ರೂಪಾಯಿ ಕೊಡಬೇಕೆಂಬುದು ಅತ್ತೆಯ ಆದೇಶ. ಸಂಪಾದನೆಗೆ ಬೇರೆ ದಾರಿ ಕಾಣದೆ 24ರ ಯುವ ವಿಧವೆ ಆರಿಸಿಕೊಳ್ಳುವುದು ವೇಶ್ಯಾವೃತ್ತಿ. ಆ ನಂತರ ಲೈಂಗಿಕ ಕಾರ್ಯಕರ್ತೆಯರ ಸಂಘಟನೆಯ ನಾಯಕಿಯಾಗಿ ನಳಿನಿ ಜಮೀಲಾ ಬೆಳೆಯುತ್ತಾಳೆ. ನಳಿನಿ ಜಮೀಲಾಳ ಬದುಕಿನ ಕಥೆ 'ಇ(ಯಾ)ನ್ ಒರು ಲೈಂಗಿಕ ತೊಬಿಲಾಳಿ' ಮಲಯಾಳಂನಲ್ಲಿ 2005ರಲ್ಲಿ ಪ್ರಕಟವಾಗಿ ವಿವಾದಾತ್ಮಕ ಕೃತಿ ಎನಿಸಿ 'ಬೆಸ್ಟ್ ಸೆಲ್ಲರ್' ಆಯಿತು. 100 ದಿನಗಳಲ್ಲಿ ಆರು ಮುದ್ರಣಗಳನ್ನು ಕಂಡು 13,000 ಪ್ರತಿಗಳು ಮಾರಾಟವಾದವು. ಈಗ ಅದೇ ಕೃತಿಯನ್ನು ಇಂಗ್ಲಿಷ್‌ನಲ್ಲಿ 'ದಿ ಆಟೊಬಯಾಗ್ರಫಿ ಆಫ್ ಎ ಸೆಕ್ಸ್ ವರ್ಕರ್' ಎಂದು ಚೆನ್ನೈನ ವೆಸ್ಟ್‌ಲ್ಯಾಂಡ್ ಪ್ರಕಾಶನ ಸಂಸ್ಥೆ ಪ್ರಕಟಿಸಿದೆ (2007). ಕೃತಿಯ ಕೆಲವು ಮುಖ್ಯ ಅಂಶಗಳು ಇಲ್ಲಿವೆ.*

ತ್ರಿಶ್ಶೂರಿನ ಬಳಿಯ ಟೈಲ್ಸ್ ಫ್ಯಾಕ್ಟರಿಯಲ್ಲಿ ದೊರಕುತ್ತಿದ್ದ ದಿನಗೂಲಿ ರೂ. 4.50. ಆದರೆ ಮಕ್ಕಳನ್ನು ಸಲಹಲು ಪ್ರತಿ ದಿನ ಐದು ರೂಪಾಯಿ ಕೊಡಲೇ ಬೇಕು ಎಂಬುದು ಅತ್ತೆಯ ಒತ್ತಾಯವಾಗಿತ್ತು. ಮಕ್ಕಳನ್ನು ಅನಾಥಾಶ್ರಮದಲ್ಲಿ ಬಿಡುವುದಾ ಎಂಬ ಯೋಚನೆಯಲ್ಲಿದ್ದಾಗ, ಸ್ನೇಹಿತೆ ಕಾತ್ಯಾಯಿನಿ ತ್ರಿಶ್ಶೂರಿನ ರೋಸಾಚೇಚಿಯನ್ನು ಪರಿಚಯಿಸುತ್ತಾಳೆ. ತ್ರಿಶ್ಶೂರಿನ ರಾಮನಿಲಯಂನಲ್ಲಿ ಪೊಲೀಸ್ ಅಧಿಕಾರಿಯ ಜೊತೆ ರಾತ್ರಿ ಕಳೆಯುವುದರೊಂದಿಗೆ ಲೈಂಗಿಕ ಕಾರ್ಯಕರ್ತೆಯ ಬದುಕಿನ ಅಧ್ಯಾಯ ಆರಂಭವಾಗುತ್ತದೆ. "ಆ ರಾತ್ರಿ ನನ್ನ ಜೊತೆ ಆತನ ವರ್ತನೆ ಮೃದುವಾಗಿತ್ತು. ....ನನ್ನ ಗಂಡ ಸುಬ್ಬರೆಟ್ಟನ್ ನೆನಪುಗಳಿಗಿಂತ ಆತನ ನೆನಪು ಬೆಚ್ಚಗಿನದು. ನಾನು ಕನಸುತ್ತಿದ್ದ, ನನ್ನ ಕಲ್ಪನೆಗಳಲ್ಲಿ ಮೂಡಿ ಬರುತ್ತಿದ್ದ ಪ್ರಿಯಕರನಂತಹ ವ್ಯಕ್ತಿ....... ಆದರೆ ಇದೇ ಚೆಂದದ ವ್ಯಕ್ತಿ ಬೆಳಗ್ಗೆ ನನ್ನನ್ನು ಪೊಲೀಸರಿಗೆ ಹಸ್ತಾಂತರಿಸಿದ್ದ. ಏಕಕಾಲಕ್ಕೆ ಪುರುಷರು ಕ್ರೂರಿಗಳೂ ಆಗಿರಬಹುದು, ಮೃದುವಾಗಿಯೂ ಇರಬಹುದು ಎಂಬುದು ನನ್ನ ಮೊದಲ ಗ್ರಾಹಕನಿಂದಲೇ ನನಗೆ ಅರಿವಾಯಿತು" ಎಂದು ನಳಿನಿ ಜಮೀಲಾ ಹೇಳಿಕೊಳ್ಳುತ್ತಾರೆ (ಪುಟ 21).

ಬೆಳಗ್ಗೆ ನಡೆದು ಹೋಗುತ್ತಿದ್ದಾಗ ಪೊಲೀಸ್ ಜೀಪ್ ಬಂದು ಪಕ್ಕಕ್ಕೆ ನಿಲ್ಲುತ್ತದೆ. ಜಬರ್ದಸ್ತಿನಿಂದ ಒಳಗೆ ಹತ್ತಿಸಿಕೊಳ್ಳಲಾಗುತ್ತದೆ. ಠಾಣೆಯಲ್ಲಿ ಲಾಠಿಯ ಹೊಡೆತ. ಆಗ ನಾನು "ರಾತ್ರಿ ವೇಳೆ ಮಲಗಲು, ಬೆಳಗ್ಗೆ ಹೊಡೆಯಲು ಪೊಲೀಸರಿಗೆ ನಾವು ಬೇಕಾ" ಎಂದು ಅರಚಿದೆ. ಆ ನಂತರ ಆ ರಾತ್ರಿ ಸಬ್ ಇನ್‌ಸ್ಪೆಕ್ಟರ್‌ನೊಬ್ಬನ ಜೊತೆ ಮಲಗಿ ಬಿಡುಗಡೆ ಪಡೆಯಬೇಕಾಯಿತು(ಪುಟ 22) ಎಂಬುದನ್ನು ವಿವರಿಸುತ್ತಾರೆ ಅವರು.

ನಳಿನಿ ಜಮೀಲಾರ ಹೆಸರು ಹಿಂದೂ ಹಾಗೂ ಮುಸ್ಲಿಂ ಸಂಪ್ರದಾಯಗಳೆರಡನ್ನೂ ಧ್ವನಿಸುತ್ತದೆ. ಮೂಲತಃ ಕೇರಳದಲ್ಲಿ ಕೆಳಜಾತಿಯಾಗಿ ಪರಿಗಣಿಸಲಾದ ಎಝುಥಾವಾ ಕುಟುಂಬಕ್ಕೆ ಸೇರಿದ ಆಕೆಯ ಎರಡನೆಯ ಪತಿ ಮುಸ್ಲಿಂ. ಬಾಲ್ಯದಲ್ಲಿ ಕ್ಲೇ ಮೈನ್‌ಗಳಲ್ಲಿ ಕೂಲಿ ಕೆಲಸ ಮಾಡಿದಾಕೆ. ಪತ್ನಿ, ತಾಯಿ, ಯಶಸ್ವೀ ಉದ್ಯಮಿ, ಸಾಮಾಜಿಕ ಕಾರ್ಯಕರ್ತೆ ಹಾಗೂ ಲೈಂಗಿಕ ಕಾರ್ಯಕರ್ತೆಯಾಗಿ ತಮ್ಮ ಅನುಭವಗಳ ಬಾಳಿನ ಪುಟಗಳನ್ನು ಈ ಪುಸ್ತಕದಲ್ಲಿ ತೆರೆದಿಟ್ಟಿದ್ದಾರೆ ನಳಿನಿ ಜಮೀಲಾ.

ಘನತೆ, ಸಶಕ್ತೀಕರಣ ಹಾಗೂ ಸ್ವಾತಂತ್ರ್ಯದ ಬದುಕು ಅರಸುವ ಕಥೆಯಾಗಿ ನಳಿನಿ ಜಮೀಲಾರ ಬದುಕು ಈ ಪುಸ್ತಕದಲ್ಲಿ ಅನಾವರಣಗೊಳ್ಳುತ್ತದೆ. ಅವರು ಹೇಳುವುದು ಹೀಗೆ: "ಲೈಂಗಿಕ ಕಾರ್ಯಕರ್ತೆಯರು ನಾಲ್ಕು ವಿಧದಲ್ಲಿ ಸ್ವತಂತ್ರರು. ಗಂಡನಿಗಾಗಿ ಅಡುಗೆ ಮಾಡಬೇಕಿಲ್ಲ; ಅವರ ಕೊಳಕು ಬಟ್ಟೆಗಳನ್ನು ಒಗೆಯಬೇಕಿಲ್ಲ; ನಮ್ಮ ಕನಸಿಗೆ ತಕ್ಕಂತೆ ಮಕ್ಕಳನ್ನು ಬೆಳೆಸಲು ಅವರ ಅನುಮತಿ ಪಡೆಯಬೇಕಿಲ್ಲ; ಪತಿಯ ಆಸ್ತಿಗಾಗಿ ಹಕ್ಕು ಪ್ರತಿಪಾದಿಸಿಕೊಳ್ಳುತ್ತಾ ಅವರ ಹಿಂದೆ ಓಡಬೇಕಿಲ್ಲ".

ಈ ಧಾಟಿಯ, ಸ್ತ್ರೀತ್ವದ ಆದರ್ಶಗಳಿಗೆ ಸವಾಲೆಸೆಯುವ ಅವರ ಮಾತುಗಳು ಮಲಯಾಳಿ ಸಾರ್ವಜನಿಕ ವಲಯದಲ್ಲಿ ವಿರೋಧಿ ದನಿಯಾಗಿ ದಾಖಲಾಗಿವೆ. ವೇಶ್ಯೆ ಅಥವಾ 'ಪ್ರಾಸ್ಟಿಟ್ಯೂಟ್ ಸ್ಟೀರಿಯೊಟೈಪ್' ನ ಮಿಥ್ಯೆಯನ್ನೂ ನಳಿನಿ ಜಮೀಲಾ ಅವರ ಆತ್ಮಕಥೆ ಛಿದ್ರಗೊಳಿಸುತ್ತದೆ. ಮಲಯಾಳಂನಲ್ಲಿ ಲೈಂಗಿಕ ತೊಬಿಲಾಳಿ ಎಂದರೆ ಲೈಂಗಿಕ ಕಾರ್ಯಕರ್ತೆ. ತೊಬಿಲ್‌ನ ಘನತೆಯನ್ನು ಪ್ರತಿಪಾದಿಸುವಂತಹದ್ದು ಇದು. ತೊಬಿಲ್ ಎಂದರೆ 'ಕೆಲಸ' ಹಾಗೂ 'ವೃತ್ತಿ' ಎಂಬುದನ್ನು ಧ್ವನಿಸುವಂತಹದ್ದು.

ಜಮೀಲಾ ಈ ಆತ್ಮಕಥೆ ರಚನೆಯಲ್ಲಿ ಅನಾಮಧೇಯತೆಯನ್ನು ಉಳಿಸಿಕೊಂಡಿಲ್ಲ. ಆರಂಭದಲ್ಲೇ ಈ ಪುಸ್ತಕ ಬರೆಯುವ ಪ್ರಯತ್ನದ ಅಂಗವಾಗಿ ಆಕೆ ಬರೆದಿಟ್ಟಿದ್ದ ವೈಯಕ್ತಿಕ ವಿವರಗಳನ್ನೋದಿದ ಆಕೆಯ ಗಿರಾಕಿ ಆಕೆಯ ಕೈಬಿಟ್ಟು ಹೋಗುತ್ತಾನೆ. 'ನಾನು ನಳಿನಿ ಜಮೀಲಾ . ನನಗೆ 49 ವರ್ಷ' ಎಂದು ಆಕೆ ಬರೆದಿಟ್ಟಿದ್ದನ್ನು ಆ ಗಿರಾಕಿ ನೋಡಿ ಬಿಡುತ್ತಾನೆ. ಆದರೆ ಆಕೆ ಆತನೊಂದಿಗೆ ತನಗೆ 42 ವರ್ಷ ಎಂದು ಹೇಳಿಕೊಂಡಿರುತ್ತಾರೆ. ಇಂತಹ ಘಟನೆಗಳು ಆರಂಭದಲ್ಲಿ ನಳಿನಿಯವರ ಬರವಣಿಗೆಯ ಪ್ರಯತ್ನಕ್ಕೆ ಮೊದಮೊದಲು ತಡೆ ಒಡ್ಡಿದವು ಎಂಬುದನ್ನೂ ಅವರು ಹೇಳಿಕೊಂಡಿದ್ದಾರೆ.

ಲೈಂಗಿಕ ಕಾರ್ಯಕರ್ತೆಯಾಗಿ ಬರೀ ಲೈಂಗಿಕ ಸಾಹಸಗಳನ್ನು ಈ ಕೃತಿ ನಿರೂಪಿಸುವುದಿಲ್ಲ. ಪತ್ನಿ, ತಾಯಿ, ಗಂಡನ ಮನೆಯ ಸದಸ್ಯೆಯಾಗಿರುವ ಅನುಭವಗಳು, ಮಗಳ ಮದುವೆ, ಅಳಿಯ...ಹೀಗೆ ಕುಟುಂಬದ ವಿವರಗಳೂ ಕೃತಿಯಲ್ಲಿ ಬಿಚ್ಚಿಕೊಳ್ಳುತ್ತವೆ. ಸೆಕ್ಸ್ ವರ್ಕ್ ಅನ್ನು ಸಂತೋಷ ಹಾಗೂ ಸೌಂದರ್ಯದ ಸೃಷ್ಟಿ ಎಂದು ಹೇಳುವ ಜಮೀಲಾ ಇದೂ ಒಂದು ತರಹದ ಕೌನ್ಸೆಲಿಂಗ್ ಹಾಗೂ ಥೆರಪಿ ಎಂದು ಬಣ್ಣಿಸುತ್ತಾರೆ. ತಮಗೆ ಇದರಲ್ಲಿ ಪರಿಣಿತಿ ಇದೆ ಎಂದೂ ಪ್ರತಿಪಾದಿಸಿಕೊಳ್ಳುತ್ತಾರೆ. ಪುರುಷ ಹಾಗೂ ಮಹಿಳೆಯಲ್ಲಿ ಭಿನ್ನತೆ ಇದೆ ಎಂಬ ವಾದವನ್ನೂ ಅವರು ಮಂಡಿಸುತ್ತಾರೆ.

'ಹೆಣ್ತನ(ಫೆಮಿನಿನಿಟಿ) ಮಹಿಳೆಯ ಶಕ್ತಿ. ಕೂದಲು ಕತ್ತರಿಸಿಕೊಳ್ಳುವುದು ಅಥವಾ ಪ್ಯಾಂಟ್ ಹಾಕುವ ಮೂಲಕ ಪುರುಷರನ್ನು

ಅನುಕರಿಸುವುದರಿಂದ ಹೆಚ್ಚಿನ ಅನುಕೂಲವಿಲ್ಲ. ನಾನು ಅನೇಕ ಪುರುಷರೊಂದಿಗೆ ಆತ್ಮೀಯವಾಗಿದ್ದಂತಹವಳು. ಅವರೂ ಕೂಡ ಸ್ವತಂತ್ರರಲ್ಲ ಎಂಬುದು ನನಗೆ ತಿಳಿದಿದೆ. ಹೀಗಾಗಿ ಅವರಂತೆ ಆಗುವುದರಲ್ಲಿ ಅರ್ಥವಿಲ್ಲ' (ಪುಟ 109).

ಸೆಕ್ಸ್‌ವರ್ಕ್ ಅನ್ನು 'ವೃತ್ತಿಪರ ಚಟುವಟಿಕೆ'ಯಾಗಿಸಿ ಪುನರ್‌ಮೌಲ್ಯ ಮಾಪನವಾಗಬೇಕೆಂಬುದು ಜಮೀಲಾರ ವಾದ. ಸೆಕ್ಸ್ ವರ್ಕ್‌ಗೆ ಸಾರ್ವಜನಿಕ ಅಸ್ಮಿತೆಯನ್ನು ಕಂಡುಕೊಳ್ಳುವ ಪ್ರಯತ್ನ ಇದು. "ಟೆಲಿವಿಷನ್‌ನ ಏಷ್ಯಾನೆಟ್ ನ್ಯೂಸ್ ಅವರ್‌ನಲ್ಲಿ ಲೈವ್ ಕಾರ್ಯಕ್ರಮ ವೊಂದರಲ್ಲಿ ಪಾಲ್ಗೊಂಡಿದ್ದಾಗ, ಸೆಕ್ಸ್ ವರ್ಕ್ ಅಂತ್ಯಗೊಳಿಸಲು ನಿಮ್ಮ ಕಾರ್ಯಕ್ರಮಗಳೇನು ಎಂಬ ಪ್ರಶ್ನೆಗೆ ಅದನ್ನು ಕಾಪಾಡಿಕೊಂಡು ಹೋಗುವುದು ನನ್ನ ಅಪೇಕ್ಷೆ ಎಂಬ ನನ್ನ ಉತ್ತರ ಬಹಳ ಜನರಿಗೆ ಇಷ್ಟ ಆಗಿರಲಿಲ್ಲ. ಆದರೆ ಲೈವ್ ಕಾರ್ಯಕ್ರಮವಾಗಿದ್ದರಿಂದ ಎಡಿಟ್ ಮಾಡುವುದೂ ಸಾಧ್ಯವಾಗಿರಲಿಲ್ಲ". (ಪುಟ 109) ಎಂದು ಹೇಳಿ ಕೊಂಡಿದ್ದಾರೆ.

ಏಡ್ಸ್ ತಡೆ ಪ್ರಚಾರಾಂದೋಲನಗಳ ಅಂಗವಾಗಿ ಎನ್‌ಜಿಓ ಗಳಿಂದ ಲೈಂಗಿಕ ಕಾರ್ಯಕರ್ತೆಯರ ಪುನರ್ ಸಂಘಟನೆಯ ಸಂದರ್ಭದಲ್ಲಿ ಸಾರ್ವಜನಿಕ ಬದುಕಿಗೆ ಜಮೀಲಾಳ ಪ್ರವೇಶವಾಯಿತು. ಜೊತೆಗೆ ಮಲಯಾಳಂ ಚಿತ್ರ 'ಸುಸಾನ್ನಾ' ಬಿಡುಗಡೆಯ ನಂತರ ಸಾರ್ವಜನಿಕ ವಾಗಿ ಲೈಂಗಿಕ ಕಾರ್ಯಕರ್ತೆಯರು ತಮ್ಮನ್ನು ತಾವು ಪ್ರತಿಪಾದಿಸಿ ಕೊಳ್ಳತೊಡಗಿದ್ದರು.

ಸೆಕ್ಸ್‌ವರ್ಕ್ ಅನ್ನು ಡಿ ಕ್ರಿಮಿನಲೈಸ್ ಮಾಡಬೇಕೆಂಬುದು ನಮ್ಮ ಒತ್ತಾಯ ಎಂದು ನಳಿನಿ ಹೇಳುತ್ತಾರೆ (ಪುಟ 110). ಅಂದರೆ ಲೈಸೆನ್ಸ್ ಕೊಡುವುದು ಎಂದರ್ಥವಲ್ಲ. ಅದು ಮತ್ತೊಂದು ಬಗೆಯ ಹೊಸ ಸಮಸ್ಯೆಗಳನ್ನು ಹುಟ್ಟಿ ಹಾಕುತ್ತದೆ. ಭ್ರಷ್ಟಾಚಾರ ಹೆಚ್ಚಿಸುತ್ತದೆ. 'ಡಿ ಕ್ರಿಮಿನಲೈಸಿಂಗ್' ಎಂದರೆ ಇಬ್ಬರು ವ್ಯಕ್ತಿಗಳು ಪರಸ್ಪರ ಒಪ್ಪಿಗೆಯೊಂದಿಗೆ ಸೆಕ್ಸ್ ಹೊಂದಲು ಬಯಸುವುದಾದಲ್ಲಿ ಅದರಿಂದ ಬೇರೆಯವರಿಗೆ ತೊಂದರೆ ಇರದಿದ್ದಲ್ಲಿ ಆಗ ಅದನ್ನು ಪ್ರಶ್ನಿಸಬಾರದು.ಇದು ಕೇರಳದಲ್ಲಿ ಬಹಳ ಮುಖ್ಯ. ಏಕೆಂದರೆ ಕೇರಳದಲ್ಲಿ ಬ್ರಾಥೆಲ್ (ವೇಶ್ಯಾಗೃಹ)ಗಳಿಲ್ಲ. ನನ್ನ ಸಂಘಟನೆಯ ಕೆಲಸವಾಗಿ ನಾನು ಅನೇಕ ಬ್ರಾಥೆಲ್‌ಗಳಿಗೆ ಭೇಟಿ ನೀಡಿದ್ದೇನೆ. ಕೊಲ್ಕೊತ್ತಾ ಹಾಗೂ ಕರ್ನಾಟಕಗಳಲ್ಲಿ ಇವನ್ನು ಅತ್ಯುತ್ತಮ ವಾಗಿ ನಡೆಸಲಾಗುತ್ತಿದೆ. ಈ ಸ್ಥಳಗಳಲ್ಲಿ ಸ್ವಲ್ಪ ಮಟ್ಟಿಗೆ ಇವು ಅಂಗೀಕಾರಾರ್ಹ ಕೂಡ. ಮುಂಬೈ ಮತ್ತಿತರ ಕಡೆಗಳಲ್ಲಿ ಇವು ಅಧ್ವಾನಮಯ. ಅದೂ ಮುಂಬೈನಲ್ಲಂತೂ ಅತ್ಯಂತ ಕೆಟ್ಟದ್ದಾಗಿವೆ. ಕೊಲ್ಕೊತ್ತಾ ಹಾಗೂ ಕರ್ನಾಟಕಗಳಲ್ಲಿ ಬ್ರಾಥೆಲ್‌ನ ಲೈಂಗಿಕ ಕಾರ್ಯಕರ್ತೆಯರಿಗೆ ತಮ್ಮ ಗಿರಾಕಿ ಗಳನ್ನು ಆಯ್ಕೆ ಮಾಡಿಕೊಳ್ಳುವ, ಹಣವನ್ನು ನಿಗದಿ ಪಡಿಸುವ ಹಾಗೂ ಪ್ರತಿ ಗಿರಾಕಿಯೊಡನೆ ಕಳೆಯಬೇಕಾದ ಸಮಯದ ಪ್ರಮಾಣವನ್ನು ನಿರ್ಧರಿಸಬಹುದಾದ ಸ್ವಾತಂತ್ರ್ಯವಾದರೂ ಇರುತ್ತದೆ" (ಪುಟ 111) ಎಂದು ನಳಿನಿ ಹೇಳುತ್ತಾರೆ.

ಸಾಮಾನ್ಯವಾಗಿ ಬಹುಪಾಲು ಸ್ತ್ರೀವಾದಿಗಳು ಲೈಂಗಿಕ ಕಾರ್ಯಕರ್ತೆಯರನ್ನು ಅಂಗೀಕರಿಸಲು ಹಿಂದೆ ಮುಂದೆ ನೋಡುತ್ತಾರೆ. ಇದಕ್ಕೆ ಕಾರಣವೆಂದರೆ ಸೆಕ್ಸ್ ಎನ್ನುವುದು ಮಹಿಳೆಯ ಅಗತ್ಯ ಕೂಡಾ ಎಂಬುದನ್ನು ಅವರಿಗೆ ಕಂಡುಕೊಳ್ಳಲಾಗುವು ದಿಲ್ಲ. ಸಂಘಟನಾತ್ಮಕ ಚಟುವಟಿಕೆಗಳಲ್ಲಿ ನಾನು ತೊಡಗಿಕೊಂಡಾಗ ಸೆಕ್ಸ್ ಎನ್ನುವುದು ಪುರುಷನ ಅಗತ್ಯವಲ್ಲವೆ? ಅದನ್ನು ಪೂರೈಸುವ ಕ್ರಿಯೆಯಲ್ಲಿ ತೊಡಗಿಕೊಳ್ಳುವುದು ಸ್ತ್ರೀವಾದಕ್ಕೆ ಸರಿಯಾಗುತ್ತದೆಯೆ ಎಂಬಂತಹ ಪ್ರಶ್ನೆಗಳನ್ನು ಅನೇಕ ಮಂದಿ ನನ್ನನ್ನು ಕೇಳಿದ್ದಾರೆ. ಇದು ನಿಜ ಎಂದು ನನಗನಿಸುವುದಿಲ್ಲ. ಸೆಕ್ಸ್ ಬರೀ ಪುರುಷನ ಅಗತ್ಯ ಮಾತ್ರವಲ್ಲ. ಫೆಮಿನಿಸ್ಟ್‌ಗಳೂ ಸಾಧಾರಣ ಮಹಿಳೆಯರಿಗಿಂತ ತುಂಬಾ ಭಿನ್ನರೇನಲ್ಲ. ಹಾಗಾಗಿ ಇಂತಹ ಪ್ರಶ್ನೆ ಕೇಳುತ್ತಾರೆ (ಪುಟ 111) ಎಂದು ವಿಶ್ಲೇಷಿಸುತ್ತಾರೆ ನಳಿನಿ ಜಮೀಲಾ.

ಸೆಕ್ಸ್ ವರ್ಕ್ ಹಾಗೂ ಲೈಂಗಿಕ ಶೋಷಣೆ ಎರಡೂ ವಿಭಿನ್ನ. ನಮ್ಮ ಸಂಘಟನೆಯಲ್ಲಿ ಸೆಕ್ಸ್ ವರ್ಕರ್ಸ್ ಅನ್ನು ಒಂದುಗೂಡಿಸುತ್ತೇವೆ. ಶೋಷಣೆಯ ಮೂಲಕ ಈ ಲೈಂಗಿಕ ವ್ಯಾಪಾರದಲ್ಲಿ ಹಲವರು ಸಿಲುಕಿಕೊಂಡಿರಬಹುದು. ಆದರೆ ಮುಂದೆ ಒಳ್ಳೆಯದಕ್ಕೆ ಎಂದು ಇದಕ್ಕೇ ಅಂಟಿಕೊಂಡವರು ನಮ್ಮ ಸಂಘಟನೆಯ ಭಾಗವಾಗಬಹುದು. ಬೀದಿಗಳಲ್ಲಿ ಮಹಿಳೆ ಕಂಡಲ್ಲಿ ಕೌನ್ಸೆಲಿಂಗ್ ನಡೆಸಿ ಅಚಾನಕ್ಕಾಗಿ ಇದಕ್ಕೆ ಬಂದರೋ ಅಥವಾ ಆಯ್ಕೆ ಮಾಡಿಕೊಂಡ ಬದುಕೇ ಇದು ಎಂಬುದನ್ನು ತಿಳಿಯಲು ಬಯಸುತ್ತೇವೆ. ಹೊರ ಹೋಗಲು ಬಯಸುವವರಿಗೆ ಸಹಾಯ ಮಾಡಲೂ ಪ್ರಯತ್ನಿಸುತ್ತೇವೆ (ಪುಟ 112) ಎಂದೂ ನಳಿನಿ ಹೇಳುತ್ತಾರೆ.

ಸೆಕ್ಸ್ ವರ್ಕರ್‌ಗಳಿಗೆ ಕೆಲಸ ಮಾಡುವ ಸ್ವಾತಂತ್ರ್ಯ ನೀಡಿದಲ್ಲಿ, ಅವರು ವಾರದಲ್ಲಿ ಮೂರುದಿನ ಮಾತ್ರ ನಿಯಮಿತ ಆದಾಯ ಗಳಿಸಲು ಕೆಲಸ ಮಾಡಬೇಕು. ಆರೋಗ್ಯ ಉಳಿಸಿಕೊಳ್ಳಲೂ ಇದು ಸಹಾಯಕ.



ಅನಾರೋಗ್ಯಕರ ಪರಿಸರದಲ್ಲಿ ಕೆಲಸ ಮಾಡುವ ಪೌರ ಕಾರ್ಮಿಕರ ಪುನರ್ವಸತಿಗೆ ಯಾರೂ ಒತ್ತಾಯ ಮಾಡುವುದಿಲ್ಲ. ಅದರಿಂದ ಇಡೀ ಸ್ಥಳ ನಾರುತ್ತದೆ ಎಂಬುದು ಅವರಿಗೆ ಗೊತ್ತಿರುತ್ತದೆ. ಹಾಗೆಯೇ ಗುಟ್ಟಾಗಿ, ಕಳ್ಳತನದಲ್ಲಿ ಮಹಿಳೆಯರ ಸಂಪರ್ಕ ಬೆಳೆಸುವ ಪ್ರಯತ್ನಗಳೂ ನಾರುತ್ತವೆ. ಇದು ಸಮಾಜದ ಆರೋಗ್ಯ ರಕ್ಷಿಸುವಂತಹದ್ದಲ್ಲ (ಪುಟ 113) ಎಂಬ ನಿಲುವು ಅವರದ್ದು.

"ನನ್ನತ್ತೆ ನನ್ನ ಮಕ್ಕಳನ್ನು ಬೆಳೆಸಲು ಪ್ರತಿ ದಿನ 5 ರೂಪಾಯಿ ಕೇಳಿದ್ದರಿಂದ ನಾನು ಈ ವೃತ್ತಿಗಿಳಿಯಬೇಕಾಯಿತು. ಆ ಕಾಲದಲ್ಲಿ ಇನ್ನೇನು ಮಾಡಲೂ ದಾರಿ ಇರಲಿಲ್ಲ. ಬಾಡಿಗೆ ಮನೆ ಪಡೆಯುವ ಅವಕಾಶವೂ ಇರಲಿಲ್ಲ. ಆಗ ನಾನು ಜೀವನ ನಡೆಸಲು 'ಕಂಪನಿ ಹೌಸ್' ಭಾಗವಾಗಲೇ ಬೇಕಾಯಿತು. ನನ್ನ ಗಂಡ ಸತ್ತ ನಂತರ ನನ್ನ ಅಪ್ಪ, ಸೋದರರನ್ನು ಬಿಟ್ಟು ಎಲ್ಲ ಪುರುಷರೂ ನನ್ನ ಬಯಸುವವರೇ ಆಗಿದ್ದರು" ಎಂದು ಆ ದಿನಗಳ ಅಸಹಾಯಕತೆಯನ್ನು ನೆನೆದುಕೊಳ್ಳುತ್ತಾರೆ.

ಸೆಕ್ಸ್ ವರ್ಕರ್ಸ್‌ಗಳಲ್ಲಿ ಹೈ ಸೊಸೈಟಿ ಜನ, ಮಧ್ಯಮ ವರ್ಗ ಹಾಗೂ ಕೆಳ ವರ್ಗದ ಜನರಿರುತ್ತಾರೆ. 10, 15 ರೂಪಾಯಿಗೆ ದೇಹ ಮಾರಿಕೊಳ್ಳುವವರೂ ಇದ್ದಾರೆ. ಒಂದು ಗಂಟೆಗೆ ಸಾವಿರ ರೂಪಾಯಿ ಸಂಪಾದಿಸುವವರೂ ಇದ್ದಾರೆ. ಅತ್ಯಂತ ಪ್ರತಿಷ್ಠಿತರನ್ನು ಸೆಕ್ಸ್ ವರ್ಕರ್ಸ್ ಎಂದು ನಾವು ಪರಿಗಣಿಸುವುದಿಲ್ಲ. ಸಾರ್ವಜನಿಕ ದೃಷ್ಟಿಯಿಂದ ರಕ್ಷಿಸಿಕೊಳ್ಳುವುದು ಅವರಿಗೆ ಗೊತ್ತು. ಹೆಚ್ಚು ನರಳಾಟವೂ ಅವರಿಗೆ ಇರುವುದಿಲ್ಲ. ಕೆಲವು ಗಿರಾಕಿಗಳ ಕೈಯಲ್ಲಿ ನರಳಬಹುದು ಅಷ್ಟೆ. ಮಧ್ಯಮವರ್ಗದವರು ಬೇರೆ ಇನ್ನೇನಾದರೂ ಕೆಲಸದಲ್ಲೂ ತೊಡಗಿಕೊಂಡಿರುತ್ತಾರೆ. ಇವರಲ್ಲಿ ಕೆಳವರ್ಗದವರು ಹೆಚ್ಚು ನರಳುತ್ತಾರೆ. ಪೊಲೀಸರ ಬಂಧನ, ರೌಡಿಗಳ ಹೊಡೆತ ಎಲ್ಲಾ ಇವರಿಗೇ. ಬ್ರೋಕರ್‌ಗಳು ಹಾಗೂ 'ಪತಿ'ಯರಿಂದ ಅಪಾರ ಶೋಷಣೆಗೊಳಗಾಗುತ್ತಾರೆ ಲೈಂಗಿಕ ಕಾರ್ಯಕರ್ತೆಯರು. 'ಪತಿ'ಯಂದಿರೇ ಬ್ರೋಕರ್‌ಗಳೂ ಆಗಿರುತ್ತಾರೆ. ಕೆಲಸ ಮಾಡಲಿ ಬಿಡಲಿ ಅವರಿಗೆ ಹಣ, ಹೆಂಡ ಒದಗಿಸಲೇ ಬೇಕು. ಕೊಝಿಕೊಡೆಯಲ್ಲಿ ಇಂತಹವರನ್ನು 'ರೋಪರ್ಸ್' ಎಂದೂ ಕರೆಯಲಾಗುತ್ತದೆ. ಹಗ್ಗ ಎಂದರೆ ಎರಡೂ ತುದಿ ಗಂಟು ಹಾಕಲು ಬಳಸುವಂತಹದ್ದು. ಈತನ ಕೆಲಸವೂ ಅದೇ.

ಈ ವ್ಯಕ್ತಿಗಳೇ ಕೆಲವೊಮ್ಮೆ ಸೆಕ್ಸ್ ವರ್ಕರ್ಸ್‌ಗಳು ಒಂದಕ್ಕಿಂತ ಹೆಚ್ಚು ಮಗು ಪಡೆಯಲು ಕಾರಣ. ಬಹುತೇಕ ಸೆಕ್ಸ್ ವರ್ಕರ್‌ಗಳು ಕಾಂಡೊಂ ಬಳಸುತ್ತಾರೆ. ಆದರೆ ಗಂಡನ ಪಾತ್ರ ನಿರ್ವಹಿಸುವ ಈ ವ್ಯಕ್ತಿಗಳ ಜೊತೆಗಲ್ಲ. ಇವರು ಸ್ಥಿರವಾಗಿ ಒಂದೆಡೆ ನಿಲ್ಲುವುದೂ ಇಲ್ಲ. ಒಂದು ಅಥವಾ ಎರಡು ವರ್ಷ. ಮತ್ತೆ ಹೊಸ ಗಂಡ. ಅವನ ಮಗು ಹೊಂದುವ ಒತ್ತಡ. ತನಗೆ ಬೇಕಾದ್ದಕ್ಕಿಂತ ಹೆಚ್ಚು ಮಕ್ಕಳು ಹೆತ್ತು ಅಸಹಾಯಕಳಾಗುತ್ತಾಳೆ. ಮನೆ ಬಾಡಿಗೆಗೆ ಪಡೆಯುವುದು ಇಂತಹ ಕೆಲವು ವಿಚಾರಗಳಲ್ಲಿ ಈ ವ್ಯಕ್ತಿಗಳು ಸಹಾಯಕ. ಆದರೆ ಒಟ್ಟಾಗಿ ಈ ವ್ಯಕ್ತಿಗಳು 'ದೊಡ್ಡ ತೊಂದರೆ'ಯೇ ಎನ್ನುತ್ತಾರೆ (ಪುಟ 123).

ಸೆಕ್ಸ್ ವರ್ಕರ್ಸ್‌ಗಳನ್ನು ಸಂಘಟಿಸಿದ 'ಜ್ವಾಲಾಮುಖಿ' ಪ್ರಜಾಸತ್ತಾತ್ಮಕವಾದದ್ದು. ನಾನು ನಿರ್ಮಿಸಿದ ಮೊದಲ ಸಾಕ್ಷ್ಯಚಿತ್ರ 'ಜ್ವಾಲಾಮುಖಿಗಳ್'. ಎರಡನೆಯದು 'ದನಿ ಕಳೆದುಕೊಂಡವರ ಪಕ್ಷಿನೋಟ'. ಇದು ಪೊಲೀಸ್ ದೌರ್ಜನ್ಯ ಕುರಿತಾದ ಸಾಕ್ಷ್ಯಚಿತ್ರ. ಈ ಚಿತ್ರಗಳನ್ನು ಥಾಯ್‌ಲೆಂಡ್‌ನಲ್ಲಿ ಪ್ರದರ್ಶಿಸಿ ವಾಪಸಾದ ನಂತರ ಸೆಕ್ಸ್ ವರ್ಕರ್‌ಗಳಿಗೆ ಕ್ಯಾಮೆರಾಕಮ್ಮಟ ಏರ್ಪಡಿಸಿದ್ದೆವು ಎಂದು ಹೇಳಿಕೊಳ್ಳುತ್ತಾರೆ ನಳಿನಿ ಜಮೀಲಾ. ಈಗ ಸ್ವತಂತ್ರವಾಗಿ ಪೂರ್ಣ ಪ್ರಮಾಣದ ಸಿನಿಮಾ ತಯಾರಿಸುವ ಗುರಿ ಅವರದು.

ಪುಸ್ತಕದ ಕಡೆಯ ಅಧ್ಯಾಯದಲ್ಲಿ ಈ ಪುಸ್ತಕವನ್ನು ಮಲಯಾಳಂ ನಿಂದ ಇಂಗ್ಲಿಷ್‌ಗೆ ಅನುವಾದಿಸಿ ಮುನ್ನುಡಿ ಬರೆದಿರುವ ಜೆ. ದೇವಿಕಾ ಅವರು ನಳಿನಿ ಜಮೀಲಾ ಅವರೊಡನೆ ನಡೆಸಿರುವ ಪ್ರಶ್ನೋತ್ತರವಿದೆ. ಮಲಯಾಳಂನಲ್ಲಿ ಪ್ರಕಟವಾದ ಆತ್ಮಕತೆಯನ್ನು ತಿರಸ್ಕರಿಸಿ ಎರಡನೇ ಆವೃತ್ತಿಯೇ ಅಥೆಂಟಿಕ್ ಎಂದು ಘೋಷಿಸಿ ಪುನರ್ ಪ್ರಕಟಿಸಿದ ನಳಿನಿ ಜಮೀಲಾ ಅವರ ದಿಟ್ಟ ನಿರ್ಧಾರದ ಹಿಂದಿನ ಕಾರಣ ಏನು ಎಂಬ ಪ್ರಶ್ನೆ ಇದೆ. ಇದಕ್ಕೆ ಉತ್ತರಿಸುತ್ತಾ "ನನ್ನ ಪುಸ್ತಕವನ್ನು ಮತ್ತೆ ಬರೆಯುತ್ತೇನೆ ಎಂದಾಗ ದೊಡ್ಡ ವಿವಾದವೇ ಸೃಷ್ಟಿಯಾಯಿತು. ಮೊದಲ ಆವೃತ್ತಿ ಪ್ರಕಟವಾದಾಗಲೂ ನಾನು ಹಾಗೂ ನನ್ನ ಕಥೆ ಸುಳ್ಳು ಎಂದೇ ಅನೇಕರು ಭಾವಿಸಿದ್ದರು. ಈ ವಿವಾದ ತಣ್ಣಗಾಗುವ ಮೊದಲೇ ನನ್ನ ಪುಸ್ತಕ ಮತ್ತೆ ಪುನರ್ವಿಮರ್ಶಿಸಿ ಬರೆಯುತ್ತೇನೆ ಎಂದಾಗ ಈ ವಿವಾದದ ಬೆಂಕಿಗೆ ತುಪ್ಪ ಸುರಿದಂತಾಯಿತು. ಮೊದಲ ಆವೃತ್ತಿ ಬರೆಯಲು ಸಹಾಯ ಮಾಡಿವ ವ್ಯಕ್ತಿ (ಗೋಪಿನಾಥ್) ನನ್ನನ್ನು 'ಸೃಷ್ಟಿಸಿದ್ದರು'. ನಾನು ಮಹಿಳೆ ಆದ್ದರಿಂದ 'ಸ್ತ್ರೀವಾದಿ'ಗಳು ನನ್ನನ್ನು ಆತನಿಂದ ಕದ್ದರು. ನೀವು ಹೇಗೇ ನೋಡಿ, ಈ ಕಥೆಯಲ್ಲಿ ಇತರರ ರಾಗಕ್ಕೆ ಕುಣಿವ ಬೊಂಬೆಯಾಗಿದ್ದೆ ನಾನು.

"ಆದರೆ ಸಮಾನ ನೆಲೆಯ ಸಂಬಂಧ ಹೊಂದಿರುವ ಅನೇಕ ಸ್ನೇಹಿತರು ನನ್ನ ಜೊತೆಗಿರುವುದರಿಂದ ಮತ್ತೆ ಬರೆಯುವ ನಿರ್ಧಾರ ಕೈಗೊಳ್ಳುವುದು ನನಗೆ ಸಾಧ್ಯವಾಯಿತು. ಅವರು ನನಗೆ ಹೇಗೆ ಬರೆಯಬೇಕೆಂದು ನಿರ್ದೇಶಿಸುತ್ತಿರಲಿಲ್ಲ. ನನಗಿಂತ ತಾವು ಹೆಚ್ಚು ಬುದ್ಧಿವಂತರೆಂದು ತೋರಿಸಿಕೊಳ್ಳುತ್ತಿರಲಿಲ್ಲ. ಅಥವಾ ಅವರಿಗಿಂತ ನಾನು ಕಡಿಮೆ ಬುದ್ಧಿವಂತೆ ಎಂಬ ಭಾವನೆಯೂ ನನಗೆ ಬರುತ್ತಿರಲಿಲ್ಲ. ಅವರೆಲ್ಲಾ ಒಂದು ಗ್ರೂಪ್ ಆಗಿ ಕೆಲಸ ಮಾಡಿದರು. ಅದು ನನಗೆ ಒಳ್ಳೆಯದಾಯಿತು. ಅವರ ಹಲವು ಪ್ರಶ್ನೆಗಳು ನನ್ನ ನೆನಪುಗಳನ್ನು ಪುನರ್‌ಚೈತನ್ಯಗೊಳಿಸಿ ಒಳ್ಳೆಯ ಕಥೆ ಹೇಳಲು ಸಹಾಯಕವಾಯಿತು.

"ಆದರೆ ಮೊದಲ ಆವೃತ್ತಿಯಲ್ಲಿ ಈ ತರಹ ಆಗಿರಲಿಲ್ಲ. ಆಗ ನನ್ನ ಜೊತೆ ಬರವಣಿಗೆಗೆ ಸಹಾಯಕರಾಗಿದ್ದವರು ಇತರರ ಪಾಲ್ಗೊಳ್ಳುವಿಕೆಗೆ ಅವಕಾಶ ನೀಡಿರಲಿಲ್ಲ. ಬರೀ ಅವರ ಶ್ರಮವೇ ಮುಖ್ಯವಾಗಿತ್ತು. ಕಥೆ ರೂಪುಗೊಳ್ಳುವಲ್ಲಿ ನನ್ನಪಾತ್ರ ಹೆಚ್ಚಿರಲಿಲ್ಲ. ಶೈಲಿಯ ಬಗ್ಗೆ ನಾನೇನಾದರೂ ಸಲಹೆ ನೀಡಿದಲ್ಲಿ ಅದು ಸಮರ್ಪಕವಲ್ಲ; ಅದು ಹಾಗಲ್ಲ, ಆತ್ಮಕತೆ ನಿಯಮಾವಳಿಗೆ ಇದು ಹೊಂದುವುದಿಲ್ಲ ಎಂಬಂತಹ ಮಾತುಗಳನ್ನು ಹೇಳಿ ನನ್ನ ಸಲಹೆ ತಳ್ಳಿಹಾಕುತ್ತಿದ್ದರು. ನನಗೆ ಬೇಕಾದಂತೆ ಈ ಕಥೆ ಬರೆದು ಅದನ್ನು ಸಾರ್ವಜನಿಕಗೊಳಿಸುವ ಹೋರಾಟವೂ ನನ್ನ ಇಡೀ ಬದುಕಿನ ಯಾವುದೇ ಹೋರಾಟದಷ್ಟೇ ತೀವ್ರವಾಗಿತ್ತು, ಮುಂದೆ ಬಹುಶಃ 'ನನ್ನ ಆತ್ಮಕತೆ, ಭಾಗ 2' ಸಹ ಬರೆಯಬಹುದೇನೊ. ಎಲ್ಲಿಯವರೆಗೆ ಬೇರೆಯವರ ಬದುಕು ನೋವುಗಳಿಗೆ ಬೆಳಕು ಚೆಲ್ಲುವಂತಹ ಫಲಪ್ರದ ಬದುಕು ಮುಂದುವರಿಯುತ್ತದೊ, ಅದನ್ನು ನಿಮ್ಮ ಕೈಲಾದಷ್ಟು ಬೇರೆಯವರೊಡನೆ ಹಂಚಿಕೊಳ್ಳಬೇಕು. ಆ ಕಾರಣಕ್ಕಾಗಿ ನನ್ನ ಬದುಕಿನ ಕಥೆಯನ್ನು ಹೇಳುವುದನ್ನು ಮುಂದುವರಿಸುತ್ತೇನೆ" (ಪುಟ 143) ಎಂಬ ನಳಿನಿ ಜಮೀಲಾ ಅವರ ಭರವಸೆಯ ಮಾತಿನೊಂದಿಗೆ ಕೃತಿ ಮುಕ್ತಾಯವಾಗುತದೆ.

● ಸಿ.ಜಿ.ಮಂಜುಳಾ

# 'ಗರೀಬ್ ಕಿ ಜೊರು'- ಇಸ್ಮತ್ ಚುಗ್ತೈ ಅವರ ಕಥೆ 'ಲಿಹಾಫ್'ನ ನೆನಪು ಮತ್ತು 'ಕೌದಿ' ನಾಟಕ

• *ಶ್ರೀಕಾಂತ ಪ್ರಭು*

**'ಕೌ**ದಿ', ಇಸ್ಮತ್ ಚುಗ್ತೈ ಅವರ ಉರ್ದು ಕಥೆಯ ಕನ್ನಡ ನಾಟಕರೂಪ ಭವಾನಿ ಪ್ರಕಾಶ್ ಮತ್ತು ಸುರೇಖ ಅವರ ರಂಗ ಪ್ರಸ್ತುತಿ. ಸುಮಾರು 45 ನಿಮಿಷಗಳ ಕಾಲ ಭವಾನಿ ರಂಗದ ಮೇಲೆ ಕಥೆಯ ಎರಡು ಮುಖ್ಯ ಪಾತ್ರಗಳನ್ನು ರೂಪಿಸುತ್ತಾ ಒಂದು ಅಪೂರ್ವ ಜಗತ್ತಿನ ಪರಿಚಯ ಮಾಡಿಸಿದರು.

ನಾಟಕವನ್ನು ನೋಡುತ್ತಿದ್ದಂತೆ ಚುಗ್ತೈ ಅವರ ಕಥೆ ಮತ್ತೆ ಮತ್ತೆ ನೆನಪಿಗೆ ಬರತೊಡಗುತ್ತಿತ್ತು. ಆ ನೆನಪುಗಳನ್ನು ಮೆಲುಕು ಹಾಕುತ್ತ ಹೊರಟಾಗ ಅನೇಕ ಅಂಶಗಳು ಹೊಳೆಯತೊಡಗಿದವು. ನಾಟಕ ನೋಡಿದ ಮೇಲೆ ಕಥೆಯನ್ನು ಮತ್ತೊಮ್ಮೆ ಓದಿ ಖುಶಿ ಪಟ್ಟದ್ದಾಯಿತು. ರಂಗ ರೂಪಾಂತರಕ್ಕೆ ಹಲವು ಬದಲಾವಣೆಗಳನ್ನು ಮಾಡಿಕೊಂಡು ಪ್ರದರ್ಶಿಸಿದ ನಾಟಕದಲ್ಲಿ ತಂಡದ ಶ್ರಮ ಮತ್ತು ಕಥೆಗೆ ಹೊಸ ಒಳ ನೋಟಕೊಡುವ ಪ್ರಯತ್ನ ಎದ್ದು ಕಾಣಿಸುತ್ತಿತ್ತು. ಮೊದಲನೆಯ ಪ್ರದರ್ಶನಕ್ಕೆ ಉಂಟಾಗುವ ಎಲ್ಲ ಗಲಿಬಿಲಿ, ಗೊಂದಲಗಳು ಅಲ್ಲಿದ್ದವು. ಬೆಳಕಿನ ನಿರ್ವಹಣೆ ಕೈ ಕೊಟ್ಟಿದ್ದು ನಾಟಕದ ಸರಳ ಗತಿಗೆ ಆಗಾಗ ತೊಂದರೆ ಉಂಟುಮಾಡುತ್ತಿತ್ತು. ಭವಾನಿ ಒಬ್ಬ ಸಮರ್ಥ ನಟಿ ಎಂಬುದರಲ್ಲಿ ಸಂಶಯವಿಲ್ಲ. ನಾಟಕದ ರೂಪಾಂತರದಲ್ಲಿ ತಂಡ ಮಾಡಿಕೊಂಡ ಕೆಲವು ಆಯ್ಕೆಗಳಿಂದಾಗಿ ಪ್ರೇಕ್ಷಕರಿಗೆ ಪಾತ್ರಗಳನ್ನು ಬಿಡಿ ಬಿಡಿಯಾಗಿ ಗುರುತಿಸಿಕೊಳ್ಳುವುದರಲ್ಲಿ ಸ್ವಲ್ಪ ಮಟ್ಟಿನ ತೊಡಕು ಉಂಟುಮಾಡಿತು. ಇಡಿಯಾಗಿ ನೋಡಿದಾಗ ನಾಟಕ ಒಂದು ಒಳ್ಳೆಯ ಪ್ರಯತ್ನ ಎಂಬುದರಲ್ಲಿ ಸಂಶಯವಿಲ್ಲ. ಕಥೆಯ ವಿಷಯ ನಮ್ಮನ್ನು ಅನೇಕ ಆಲೋಚನೆಗಳಿಗೆ ಒಡ್ಡುತ್ತದೆ. ಅತ್ಯಂತ ಮೊನಚಾದ ವ್ಯಂಗ್ಯ ಮತ್ತು ಹಾಸ್ಯಭರಿತ, ಸ್ವಲ್ಪ ಮಟ್ಟಿಗೆ "ಅಡಲ್ಟ್" ಅನ್ನಿಸಬಹುದಾದ ವಿಶ್ಲೇಷಣೆಯ ಮೂಲಕ ಕಥೆ ನಮ್ಮನ್ನು ಕಾಡುತ್ತದೆ.

ಕಥೆಯಲ್ಲಿದ್ದ ಇಂತಿಂಥ ಅಂಶಗಳು ನಾಟಕದಲ್ಲಿಲ್ಲ ಅಂತ ತುಲನೆ ಮಾಡಲು ಹೊರಟರೆ ಅದು ನಾಟಕದ ಬಗೆಗಿನ ಮಾತಾಗಿರುವುದಿಲ್ಲ. ಅದು ಇನ್ನಾರೋ ಊಹಿಸಿಕೊಂಡ ಅಥವಾ ಅವರೇ ಮಾಡಬಹುದಾದ ನಾಟಕದ ಕಲ್ಪನೆಯಾಗಿರುತ್ತದೆ. ಇಂಥ ಗೊಂದಲಗಳನ್ನಿಟ್ಟುಕೊಂಡು ಕಥೆಯ ಬಗ್ಗೆ ಸ್ವಲ್ಪ ಮಾತನಾಡಬೇಕಾಗುತ್ತದೆ. ಇಲ್ಲಿ ನಾಟಕ ಮತ್ತು ಕಥೆ ಎರಡೂ ಕೃತಿಗಳ ಬಗ್ಗೆ ಒಟ್ಟೊಟ್ಟಿಗಿನ ಅನಿಸಿಕೆಗಳಿವೆ. ಒಂದು ಉತ್ತಮ ಕಥೆಯನ್ನು ಈ ನೆಪದಲ್ಲಿ ಮತ್ತೆ ಮೆಲುಕು ಹಾಕಿಕೊಳ್ಳುತ್ತ ಅದರ ಬೇರೆ ಬೇರೆ ಆಯಾಮಗಳನ್ನು ನೋಡಲು, ಹಂಚಿಕೊಳ್ಳಲು ಇದೊಂದು ಅವಕಾಶ. ನಾಟಕ ಪ್ರದರ್ಶನ ಇದನ್ನು ಸಾಧ್ಯವಾಗಿಸಿದೆ.

ಹೆಚ್ಚಿನ ಅಂಶಗಳು ನಾಟಕದಲ್ಲಿರುವಂಥವೆ. ನಾಟಕದಲ್ಲಿ ಶೋಕದ ಛಾಯೆ ತುಂಬ ದಟ್ಟವಾಗಿತ್ತು. ಕಥೆಯಲ್ಲಿರುವ ಹಾಸ್ಯವನ್ನು ಅಷ್ಟಾಗಿ ಅವರು ಗಮನಕ್ಕೆ ತೆಗೆದುಕೊಂಡಿಲ್ಲ. ಅದು ರೂಪಾಂತರಕಾರರು ಮಾಡಿಕೊಂಡ ಆಯ್ಕೆ. ಅದನ್ನು ಪ್ರಶ್ನಿಸುವುದಕ್ಕಾಗುವುದಿಲ್ಲ. ತಾವು ಹಿಡಿದ ಎಳೆಯನ್ನು ತಂಡ ಸಮರ್ಥವಾಗಿಯೇ ಪ್ರದರ್ಶಿಸಿತು.

ಚುಗ್ತೈ ಅವರ ಕಥೆ ಪೂರ್ತಿ ಫಸ್ಟ್‌ಪರ್ಸನ್ ನಿರೂಪಣೆ. ರೂಪಾಂತರಕಾರರಿಗೆ ಕಥೆ ಒಡ್ಡುವ ಮೊದಲಸವಾಲು ಇದು. ಕೆಲವೊಂದು ಪಾತ್ರಗಳಿಗೆ ಧ್ವನಿ ಕೊಡದಿದ್ದರೆ ತಂತ್ರದ ದೃಷ್ಟಿಯಿಂದ ನಿರೂಪಣೆ ಸೊರಗಬಹುದು. ಬೇಗಮ್ ಜಾನ್ ಪಾತ್ರಕ್ಕೆ ಧ್ವನಿ ಕೊಟ್ಟು ಆಕೆಯ ಮನಸ್ಸಿನ ತೊಳಲಾಟವನ್ನು ಆಕೆಯಿಂದಲೇ ಹೇಳಿಸ ಹೊರಟಾಗ ಆ ಪಾತ್ರ ತನ್ನ ಅನೇಕ ಡೈಮೆನ್ಷನ್‌ಗಳನ್ನು ಬಿಟ್ಟುಕೊಟ್ಟು ಒಂದು ಪರಿಧಿಯಲ್ಲಿ ಬಂಧಿತವಾಗಿಬಿಡುವ ಸಾಧ್ಯತೆ ಹೆಚ್ಚು. ಕಥೆಯ ಪೋಲಿತನದ ಲೇಪವಿರುವ ಹಾಸ್ಯ ಅತ್ಯಂತ ಜಟಿಲವಾದದ್ದು. ಅದು ನಿರೂಪಕಿಗೆ ಅನೇಕ ಸ್ವಾತಂತ್ರ್ಯ ಕೊಡುತ್ತದೆ.

ಕಥೆಯನ್ನು ಈ ದೃಷ್ಟಿಯಿಂದಲೂ ಓದಬಹುದು : ಬೇಗಂ ಜಾನ್ ಪಾತ್ರ ಒಂದು ಜೀವನ ಪ್ರೀತಿಯ ಪಂಜರದ ಪಕ್ಷಿ. ಆದರೆ ಅದು ತನ್ನ ಪಂಜರವನ್ನು ಪೂರ್ತಿಯಾಗಿ ಒಪ್ಪಿಕೊಂಡಿಲ್ಲ. ಆಕೆ ತನ್ನ ಪಟ ಪಟಿಸುವ ರೆಕ್ಕೆಗಳ ನಿಸರ್ಗದತ್ತ ಶಕ್ತಿಯಿಂದ ತನ್ನ ಪಂಜರದ ಸರಳುಗಳನ್ನು ಆದಷ್ಟೂ, ಸಾಧ್ಯವಾದಷ್ಟೂ ಹಿಗ್ಗಿಸಿಕೊಂಡಿದ್ದಾಳೆ ಎಂದು ಹೇಳುವುದು ಒಂದು ರೀತಿಯಲ್ಲಿ ಸರಿ ಅನ್ನಿಸುತ್ತದೆ. ಸ್ವತಃ ಗಂಡುಹುಡುಗರನ್ನು ಬಯಸುವ ನವಾಬ್ ತನ್ನ ನಿಜದ ಆಕರ್ಷಣೆಗೆ ವಿರುದ್ಧವಾಗಿ ಈ ಹೆಣ್ಣನ್ನು ಮದುವೆಯ ಹೆಸರಿನಲ್ಲಿ ಬಂದಿಯಾಗಿಸಿ, ಹೊರ ಜಗತ್ತಿನಲ್ಲಿ ದೊಡ್ಡ ಗಂಡಸು ಅನ್ನಿಸಿಕೊಳ್ಳುವವನು. ಸಮಾಜದಲ್ಲಿ ಅತ್ಯಂತ ಧಾರ್ಮಿಕ, ಸಜ್ಜನ, ಪರೋಪಕಾರಿ, ದಾನಿ ಇತ್ಯಾದಿ ಬಿರುದುಗಳನ್ನು ಪಡೆದವನು ಮತ್ತು ಇನ್ನೂ ಬೇಕು ಅನ್ನುವವನು. ಆತ ವಾರ್ಡನ್, ಆಕೆ ಖೈದಿ. ಕಥೆ ಒಂದು ಮಗುವಿನ ಕಣ್ಣಿಂದ ಈ ಖೈದಿ ಕಂಡುಕೊಳ್ಳಲು ಪ್ರಯತ್ನಿಸುವ ಸ್ವಾತಂತ್ರ್ಯದ ಹಪಾಹಪಿಯನ್ನು ಚಿತ್ರಿಸುತ್ತದೆ.

ಕಥೆಯನ್ನು ಇನ್ನೊಂದು ಮಗ್ಗುಲಿಂದ ನೋಡಿದಾಗ ಒಂದು ವಿಷಯ ಗೋಚರವಾಗುತ್ತದೆ. ಕಥೆ ಹೇಳುತ್ತಿರುವಾಕೆಗೆ ಈಗ ವಯಸ್ಸಾಗಿದೆ. ಹಳೆಯದನ್ನು ನೆನಪಿಸಿಕೊಳ್ಳುತ್ತಿರುವ ಆಕೆ ತನ್ನ ಏಕಾಕಿತನದ ಬಗ್ಗೆ ಅನೇಕ ಸೂಚನೆ ನೀಡುತ್ತಾಳೆ. ಕಥೆಯ ಆರಂಭದಲ್ಲೇ ಈ ವಿಷಾದದ ಎಳೆಯನ್ನು ಬಿಡಿಸಿದ ಕಥೆ ಮುಂದೆ ಹೋಗುತ್ತಾ

ಆಕೆಯ ಮಧುರವಾದ ಹುಸಿ ಗಂಭೀರ ನಿರೂಪಣೆಯನ್ನು ಬಿಚ್ಚಿಡುತ್ತದೆ. ವಯಸ್ಸಾಗುತ್ತಿದ್ದ ಹಾಗೆ ಈಗ ಆಕೆಗೆ ಕಾಮ, ಪ್ರೀತಿಯ ಬಗ್ಗೆ ಕೆಲವು ಹೊಸ ತಿಳಿವಳಿಕೆಗಳು ಮೂಡಿವೆ. ತನ್ನದೇ ಕೌದಿ ಹೊದ್ದು 'ತನ್ನ ಚಳಿಗಾಲವನ್ನು' ಎದುರಿಸುತ್ತಾ ಮಲಗಿದಾಕೆಯನ್ನು ಕಾಡುವ ಏಕಾಕಿತನ ಕಥೆ ಧ್ವನಿಸುವ ಮೌನ ನೋವು. ಬೆಳಗಿನ ಹೊತ್ತಿನಲ್ಲಿ ಅಮಾಯಕವಾಗಿ ಮಂಚದ ಮೇಲೆ ಅದರದೇ ಭಾಗವಾಗಿ ಬಿದ್ದುಕೊಂಡಿರುವ ಕೌದಿ ರಾತ್ರಿಯಾದರೆ ಎಂಥ ಭಯ ಹುಟ್ಟಿಸುವ ನೆರಳುಗಳನ್ನು ಗೋಡೆಯ ಮೇಲೆ ಚಿತ್ರಿಸುತ್ತದೆ! ಸ್ವಾಭಾವಿಕವಾಗಿ ನಿಸರ್ಗದತ್ತವಾಗಿ ಬಂದ ಕಾಮ 'ಸಭ್ಯ' ಸಮಾಜದ ಒಳಮನೆಗಳಲ್ಲಿ ಎಂಥ, ಎಂತೆಂಥ ವಿಕೃತಿಗಳನ್ನು ಮೂಡಿಸುತ್ತದೆ! ಮನುಷ್ಯರನ್ನು ಹಿಂಸಿಸುವ, ಅವರನ್ನು ಅನೈಸರ್ಗಿಕವಾಗಿ ನಡೆಸಿಕೊಳ್ಳುವ ವ್ಯವಸ್ಥೆಯ ಬಗ್ಗೆ ಆಕ್ರೋಶ ಮತ್ತು ತನ್ನ ಹಳೆಯ ಅನುಭವವನ್ನು ಹೊಸ ರೀತಿಯಲ್ಲಿ ನೋಡುವ ಒಳಗಣ್ಣು ತೆರೆದಿಟ್ಟು ಆಕೆ ಕಥೆ ಹೇಳುತ್ತಿದ್ದಾಳೆ. ತಾನೂ ಕೂಡ ಬೇಗಂ ಜಾನಳನ್ನು ಕಾಮಿಸಿದ್ದೆ ಮತ್ತು ಅದು ತನ್ನಲ್ಲಿ ಎಂತಹ ಗಲಿಬಿಲಿಯನ್ನು ಉಂಟುಮಾಡಿತ್ತು ಎಂಬುದನ್ನು ತಿಳಿಹಾಸ್ಯದೊಂದಿಗೆ ಆಕೆ ನಮ್ಮ ಮುಂದೆ ಬಯಲು ಮಾಡುತ್ತಾಳೆ.

ಬೇಗಂ ಜಾನ್ ಮತ್ತು ಆಕೆಯ ಪ್ರೇಯಸಿ(ಯರು) ಸಾಹಿತ್ಯ ಕ್ಷೇತ್ರದ ಒಂದು ವಿರಳ ದಿಟ್ಟ ಸೃಷ್ಟಿಗಳು. ತಮ್ಮದೇ ತೊಂದರೆ, ತೊಡಕುಗಳಿಂದ . ಬಿಡುಗಡೆಯ ದಾರಿ ಹುಡುಕುತ್ತಿರುವ ಬೇರೆ ಬೇರೆ ಪಾತ್ರಗಳ ನಡುವೆ ಬೇಗಂ ಜಾನ್ ತನ್ನ ಪ್ರೇಯಸಿಯನ್ನು ಹಿಡಿದಿಡಲು ನೋಡುತ್ತಿದ್ದಾಳೆ. ವಿರಹ, ಪ್ರೀತಿ, ತಹತಹ ಎಲ್ಲ ಇಲ್ಲಿ ದಟ್ಟ ಅನುಭವಗಳು. ಆಕೆ ತನ್ನ ಬಿಡುಗಡೆಯನ್ನು ಹುಡುಕ ಹೊರಟವಳೇ ಅಥವಾ ತನ್ನದುರಿಗಿರುವ ಎಲ್ಲವನ್ನೂ ಕಬಳಿಸಿ ಬಿಡಬೇಕೆಂಬ ಹಸಿವಿನವಳೇ? ಎಲ್ಲವನ್ನೂ ಕಬಳಿಸಬೇಕು, ಸ್ವತಃ ತಾನೇ ಬೇರೆಯವರನ್ನು ಬಂದಿಯಾಗಿಸಬೇಕು, ಬಳಸಿಕೊಳ್ಳಬೇಕು ಎಂದು ಪ್ರತಿಯೊಂದನ್ನೂ ಕಾಮಿಸುವ ವ್ಯವಸ್ಥೆಯ ಪ್ರತೀಕವೇ ಎಂಬ ಪ್ರಶ್ನೆಗಳನ್ನು ಕಥೆ ನಮ್ಮ ಮುಂದಿಡುತ್ತದೆ.

ಕಥೆಗಾರ್ತಿ ಮೊಟ್ಟ ಮೊದಲು ಗುರಿಯಾಗಿಸುವುದು ತನ್ನ ತಾಯಿಯನ್ನು. ನವಾಬ್ ಸಂಸಾರದ ಜೊತೆ ಒಡನಾಟದಲ್ಲಿರಬೇಕೆಂದು ಆಕೆ ಬೇಗಂ ಜಾನ್ ಅನ್ನು "ಸಹೋದರಿ" ಎಂದು ಕರೆಯುತ್ತಿರಬಹುದೇ ಎಂಬ ಸಂಶಯ ಆಕೆಯ ಮಗಳ ಹಾಸ್ಯ ಲೇಪದ ಮಾತಿನಲ್ಲಿ ಸೂಕ್ಷ್ಮವಾಗಿ ವ್ಯಕ್ತವಾಗುತ್ತದೆ. ತನ್ನ ಮನೆಯ ಬಡತನದ ಸುಳುಹನ್ನು ಆಕೆ ಬೇಗಂಳ ಜೊತೆಗಿನ ಸಲ್ಲಾಪದ ಮಾತುಗಳಲ್ಲಿ ಮತ್ತು ಇತರ ಸಂದರ್ಭಗಳಲ್ಲಿ ಸೂಚ್ಯವಾಗಿ ಕೊಡುತ್ತಾಳೆ.

**ಕಥೆಯನ್ನು ಈ ನಿಟ್ಟಿನಲ್ಲೂ ನೋಡುವದು ಸಾಧ್ಯ :**

ಹೈದರಾಬಾದ್ ಕರ್ನಾಟಕದ ಕಡೆ ಒಂದು ಮಾತಿದೆ. "ಗರೀಬ್ ಕಿ ಜೋರು, ಸಬ್ ಕಿ ಭಾಬಿ". (ಬಡವನ ಹೆಂಡತಿ ಎಲ್ಲರಿಗೂ "ಅತ್ತಿಗೆ") ಅಲ್ಲಿಯ ಗೆಳೆಯನೊಬ್ಬನಿಗೆ ಕೇಳಿದೆ. "ಎಷ್ಟು ಒಳ್ಳೆಯ ಸಂಪ್ರದಾಯ ನಮ್ಮದು. ಬಡವನೊಬ್ಬನ ಹೆಂಡತಿಯನ್ನು ಎಲ್ಲರೂ ಅತ್ತಿಗೆ ಎನ್ನಬೇಕಾದರೆ......". ಆತ ವ್ಯಂಗ್ಯವಾಗಿ ನಕ್ಕು ಹೇಳಿದ "ಅದೆಲ್ಲ ಏನಿಲ್ಲ ಬಿಡಿ....ಬಡವರ ಮನೆಯ ಹೆಣ್ಣುಮಕ್ಕಳಿಂದ ಬಿಟ್ಟಿ ಚಾಕರಿ ಮಾಡಿಸಿಕೊಳ್ಳಬೇಕಿದ್ದರೆ ಎಲ್ಲರೂ ಆಕೆಯನ್ನು "ಭಾಬಿ ಜರಾ ಝಾಡು ಲಗಾವ್, ಭಾಬಿ ಜರಾ ಸಬ್ಜಿ ಲಾಕೆ ದೋ... ಎನ್ನುವವರೇ!" (ಅತ್ತಿಗೆ, ಸ್ವಲ್ಪ ಕಸ ಹೊಡೆದು ಬಿಡ್ತೀಯಾ, ಅತ್ತಿಗೆ ಸ್ವಲ್ಪ ತರ್ಕಾರಿ ತಂದು ಕೊಡು....ಇತ್ಯಾದಿ ಹೇಳುವವರೇ!) ಒಬ್ಬರ ನಿಸ್ಸಹಾಯಕತೆಯನ್ನು ಬಳಸಿಕೊಳ್ಳುವಾಗ ಭಾಷೆ ಮತ್ತು ಅದು ಸೂಚಿಸುವ ಮನುಷ್ಯ ಸಂಬಂಧಗಳು ಎಲ್ಲವೂ ಕೂಡಾ ಅನೇಕ ರೂಪ ಬದಲಾಯಿಸುತ್ತ ಬಳಕೆಯಾಗುತ್ತವೆ. ಈ ತರಹದ ಬರಡು ಮಾತುಗಳು ಮತ್ತು ಅವುಗಳ ಹಿಂದಿರುವ ಅರ್ಥಗಳು ಸಮಯಕ್ಕೆ, ಸಂದರ್ಭಕ್ಕೆ ತಕ್ಕಂತೆ ಬದಲಾಗುತ್ತವೆ. ಅಂಥ ಭಾಷೆ ಬರೀ ಶೋಷಣೆಯದು ಮಾತ್ರ ಅನ್ನುವದು ಯಾವಾಗಲೂ ನಿಜವಾಗಿರಬೇಕಾಗಿಲ್ಲ. ಗದ್ದುಗೆಯ ಹತ್ತಿರದಲ್ಲಿರಬೇಕು, ತಮ್ಮ ಕೆಲಸ ಮಾಡಿಸಿಕೊಳ್ಳಬೇಕು ಎಂದುಕೊಳ್ಳುವವರು ಕೂಡ ಈ ಭಾಷೆಯನ್ನು ಸಮರ್ಥವಾಗಿ ತಮ್ಮ ಅನುಕೂಲಕ್ಕೆ ತಕ್ಕಂತೆ ಉಪಯೋಗಿಸುತ್ತಿರುತ್ತಾರೆ.

ಹೆಣ್ಣು ಹೆಣ್ಣಿನ ನಡುವಿನ ಕಾಮ ಸಂಬಂಧ ಅನೈಸರ್ಗಿಕವಲ್ಲ ಅದು ಪ್ರತಿಭಟನೆ ಎಂದು ಗುರುತಿಸಬಹುದು. ಆದರೆ ಅಂಥ ಸಂಬಂಧ, ಅದೂ ಸಮಾನ ಮನಸ್ಕರು, ಒಬ್ಬರನ್ನೊಬ್ಬರು ಗೌರವಿಸುವವರ ಅಥವಾ ಪ್ರೀತಿಸುವವರ ನಡುವೆ ಮಾತ್ರ ಸಾಧ್ಯ. ಇಲ್ಲವಾದರೆ ಅದನ್ನು ಬೇರೆ



ಪ್ರತಿಮೆಗಳ ಮೂಲಕ ಗುರುತಿಸಬೇಕಾಗುತ್ತದೆ. ರಬ್ಬೋ ತರಹದ ಗರೀಬ್ ಕಿ ಜೋರು ನವಾಬ್ ಸಂಸಾರದ/ಅಧಿಕಾರದ ಹತ್ತಿರವಾಗಲು, ಬಹಳಷ್ಟು ಕಸರತ್ತು ಮಾಡಬೇಕಾಗುತ್ತದೆ. ರಬ್ಬೋ ಕಥೆಯಲ್ಲಿ ಕಾಣಿಸಿಕೊಳ್ಳುವ ಮೊದಲೇ ಬೇಗಂ ಜೀವಚ್ಛವವಾಗಿದ್ದಾಳೆ. 'ಡ್ರಾಕುಲಾ'ಗೆ ರಕ್ತದಾನ ಕೊಟ್ಟಂತೆ ಅಂಥ ನಿರ್ಜೀವ ವ್ಯಕ್ತಿತ್ವಕ್ಕೆ ರಬ್ಬೋ ತನ್ನದೆಲ್ಲವನ್ನೂ ಕೊಟ್ಟು ಪುನಶ್ಚೇತನಗೊಳಿಸಬೇಕಾಗುತ್ತದೆ. ಮಗನ ಜೀವನವನ್ನು ಸರಿ ಮಾಡಲು ಆಕೆ ಮೊದಲು ಅವನನ್ನು ನವಾಬನ ಕಾಮಕ್ಕೆ ಒಡ್ಡಿದ್ದಾಳೆ. ಬಹುಶಃ ಪ್ರತಿಭಟನೆಯಾಗಿ ಅವನು ಅಲ್ಲಿಂದ ಓಡಿ ಹೋಗಿದ್ದಾನೆ. ಅವನನ್ನು ಮತ್ತೆ 'ಸಭ್ಯ' ಸಮಾಜದ ಅಂಗವಾಗಿಸಲು ಆಕೆ ಈಗ ಬೇಗಂ ಜಾನ್ ಅಂಥ 'ಕಳೇಬರ'ಕ್ಕೆ ಜೀವ ತುಂಬಲು ಹೊರಟಿದ್ದಾಳೆ.

ಇದಕ್ಕೆ ಎದುರಾಗಿ ನಾವು ನೋಡುವುದು ಒಬ್ಬ ಚಿಕ್ಕ ಹುಡುಗಿಯನ್ನು. ಅದೇ ತಾನೇ ವಯಸ್ಸಿಗೆ ಬರುತ್ತಿರುವ, ಕಾಮದ ಬಗ್ಗೆ ಅರ್ಥವಾಗದ ಗಲಿಬಿಲಿ ಹೊಂದಿರುವ ಆಕೆ, ಥಟ್ಟಂತ ತನ್ನೆದುರು

ತೆರೆದುಕೊಂಡ ಒಂದು ಅಸಾಮಾನ್ಯ ಸಂದರ್ಭವನ್ನು ಎದುರಿಸುವ ಬಗೆಯನ್ನು, ಬೇಗಂ ಜಾನ್ ಬಗ್ಗೆ ಆಕೆಗೆ ಆಕರ್ಷಣೆ ಇದೆ. ವಾಂಛೆ ಇದೆ. ಆಯಸ್ಕಾಂತದಂತೆ ಆಕೆಯನ್ನು ಬೇಗಂ ಜಾನ್ ಸೆಳೆಯುತ್ತಾಳೆ. ರಬ್ಬೋಳಂತೆ ಇದೂ ಕೂಡಾ ಅನೈಸರ್ಗಿಕವೆನ್ನಿಸಬಹುದಿತ್ತು. ಈ ಆಕರ್ಷಣೆಯ ಹಿಂದೆ ಒಂದು ನಿಸರ್ಗದತ್ತ ಸೆಳವಿದೆ. ಇಂಥದೊಂದು ನಿಷ್ಕಲ್ಮಷ ಪ್ರೀತಿಯಿಂದ ಬೇಗಮ್ಮಳ ಹತ್ತಿರ ಬರುವುದು ರಬ್ಬೊ ಪಾತ್ರಕ್ಕೆ ಸಾಧ್ಯವಿಲ್ಲ. ಮಗುವಿಗೆ ತನ್ನದೇ ಆದ ಬಾಲಿಶ ಸ್ವಾರ್ಥ ಇರುವ ಸಾಧ್ಯತೆಯ ಸೂಚನೆ ಕೂಡ ಕಥೆಯಲ್ಲಿದೆ. ಆದರೆ ಅದು ವಯಸ್ಕರು 'ಹೊಂದಾಣಿಕೆ' ಮಾಡಿಕೊಂಡಂತಹ ಸ್ವಾರ್ಥವಲ್ಲ. ಪ್ರೀತಿಯಿಂದ ಹತ್ತಿರ ಹೋದಾಕೆಯನ್ನು ಎದುರಾಗುವುದು ಬೇಗಂಳ 'ಕಬಳಿಕೆಯ' ಆಕ್ರಮಣ. ಅಷ್ಟೊತ್ತಿಗಾಗಲೇ ಬೇಗಂ ಜಾನ್‌ಗೆ, ರಬ್ಬೋ ತರಹ ಎಲ್ಲದಕ್ಕೂ ಮೈ, ಮನಸ್ಸು ಒಡ್ಡಿಕೊಳ್ಳುವ ಗುಲಾಮಗಿರಿಯ ಮನಃಸ್ಥಿತಿಯನ್ನು ನೋಡಿ ಅಭ್ಯಾಸವಾಗಿಬಿಟ್ಟಿದೆ. ಅನಾಯಾಸವಾಗಿ ಪ್ರೀತಿಯಿಂದ ಬಂದ ಮಗುವನ್ನು ಅರ್ಥೈಸಲಾಗದೆ ಅದನ್ನು ಬಟ್ಟೆ, ಗೊಂಬೆ ಮುಂತಾದ ಲಾಲಸೆಗಳ ಮೂಲಕ ಗೆಲ್ಲಲು ನೋಡುವ ಆಕೆಯನ್ನು ಖೈದಿ ಅನ್ನುವುದಕ್ಕಿಂತ 'ಯಜಮಾನಿ' ಅನ್ನುವುದು ಹೆಚ್ಚು ಸರಿ ಅನ್ನಿಸುತ್ತದೆ. ಈ ನವಾಬರ ಯಜಮಾನತನ ಮತ್ತು ಅವನ 'ಯಜಮಾನಿಯರ' ಸಂಸಾರ ನಮ್ಮೆದುರಿಗೆ ಎಲ್ಲ ಕಬಳಿಸುವ ರಾಜಕೀಯ ವ್ಯವಸ್ಥೆಯಾಗಿ ಮತ್ತೆ ಮತ್ತೆ ಬರುತ್ತಲೇ ಇರುತ್ತದೆ. ನಾವು ಬಿಟ್ಟ ಕಣ್ಣು ಬಿಟ್ಟುಕೊಂಡು ಅವು ಚಿತ್ರಿಸುವ ಆನೆ, ಒಂಟೆ ಮುಂತಾದ ಸರ್ಕಸ್‌ಗಳನ್ನು ನೋಡುತ್ತ ರಾತ್ರಿ ಬೆಚ್ಚಿ ಬೀಳುತ್ತೇವೆ! ಕೌದಿ ಹೊದ್ದು ಏನೂ ಕಾಣದವರ ಹಾಗೆ ಕಣ್ಣು ಬಿಟ್ಟು ಮಲಗುತ್ತೇವೆ.

ಚುಗ್ತೈ, ನಮ್ಮ ರಾಜಕೀಯ ಪ್ರಜ್ಞೆಯನ್ನು ಮತ್ತು ಅಧಿಕಾರಶಾಹಿಯ ಬೂಟು ನೆಕ್ಕುವವರನ್ನು ನಗೆ ಚಾಟಿಕೆ ಮಾಡಿದಂತಿದೆ ಕಥೆ. ರಬ್ಬೋ ತರಹದ ಬಡವರು ತಮ್ಮ ಸ್ವಾರ್ಥಕ್ಕಾಗಿ ಏನೇನನ್ನು ಮಾಡಬೇಕಾಗುತ್ತದೆ ಎಂದು ಒಂದು ಕಡೆ ಅನ್ನಿಸಿದರೆ, ಇನ್ನೊಂದು ಕಡೆ ಏನನ್ನಾದರೂ ಮಾಡಿ ಗದ್ದುಗೆಯ ಹತ್ತಿರದಲ್ಲಿರಬೇಕು ಅನ್ನುವವರನ್ನು ಕೂಡ ಲೇವಡಿ ಮಾಡುತ್ತದೆ ನಿರೂಪಣೆ. ಅಗಣಿತ ರಾಜರುಗಳು, ಮೊಘಲರು, ಬ್ರಿಟಿಷರು, ಅನಂತರ ಬಂದ ರಾಜಕೀಯ ಶಕ್ತಿಗಳು ಮತ್ತು ಅವರನ್ನು ಭೋ ಪರಾಕ್ ಎನ್ನುವ 'ಗರೀಬ್ ಕಿ ಜೋರು'ಗಳು ಎಲ್ಲರನ್ನೂ ತುಂಬ ವ್ಯವಸ್ಥಿತವಾಗಿ ಲೇವಡಿ ಮಾಡುತ್ತದೆ ಕಥೆ ಅಂತ ಅನ್ನಿಸಲು ಶುರುವಾದರೆ ಅದೇ ಇನ್ನೊಂದು. ಹೊಸ ವ್ಯಂಗ್ಯ, ಹಾಸ್ಯ ಲೇಪಿತ ನಾಟಕವನ್ನು ಅನಾವರಣ ಮಾಡಬಹುದು.

ಇಷ್ಟೆಲ್ಲ ನೆನಪಿಸಿಕೊಳ್ಳಲು ಸಹಾಯ ಮಾಡಿದ ನಾಟಕ ತಂಡಕ್ಕೆ ಆಭಾರ ಸಲ್ಲಿಸಬೇಕು. □



# ಕವಿತಾ ಲಂಕೇಶ್ ನಿರ್ದೇಶನದ 'ಅವ್ವ'

ಲಂಕೇಶರ 'ಮುಸ್ಸಂಜೆಯ ಕಥಾ ಪ್ರಸಂಗ' ಆಧಾರಿತ ಕವಿತಾ ಲಂಕೇಶರ ನಿರ್ದೇಶನದ ಬಹುನಿರೀಕ್ಷಿತ ಚಿತ್ರ 'ಅವ್ವ', ಗ್ರಾಮೀಣ ಪರಿಸರದಲ್ಲಿ ಒಂಟಿ ಮಹಿಳೆಯೊಬ್ಬಳು ಪುರುಷ ಪ್ರಪಂಚದ ತಾಖತ್ತಿಗೆ ಸವಾಲು ಹಾಕುತ್ತಾ ತನ್ನ ಬದುಕನ್ನು, ಜೊತೆಗೆ ಮಗಳ ಬದುಕನ್ನೂ ಹಸನಾಗಿಸುವ ಘಟಾವಣಿ ಹೆಂಗಸಿನ ಸುತ್ತ ಹೆಣೆಯಲಾದ ಚಲನಚಿತ್ರ. ಜೊತೆಯಲ್ಲಿ ಒಂದು ಗ್ರಾಮದಲ್ಲಿರಬಹುದಾದ ಹೊಟ್ಟೆಕಿಚ್ಚು, ಅಸೂಯೆ, ಲೈಂಗಿಕತೆಯ ಬಗೆಗಿನ ರೋಚಕತೆ, ಕುತೂಹಲ, ಭೋಳೆತನ, ಪ್ರಗತಿಪರ ವ್ಯಕ್ತಿಗಳಲ್ಲಿರುವ ಢೋಂಗಿತನ ಎಲ್ಲವನ್ನೂ ಕವಿತಾರವರು 'ಅವ್ವ' ಚಿತ್ರದಲ್ಲಿ ಹಿಡಿಯಲು ಯತ್ನಿಸಿದ್ದಾರೆ.

ಕವಿತಾರವರ ದೇವೀರಿ, ಹಾಗೂ ಪ್ರೀತಿ ಪ್ರೇಮ ಪ್ರಣಯ, ತನನಂ ತನನಂ ಚಿತ್ರಗಳನ್ನು ನೋಡಿದಾಗ ಕವಿತಾ, ಕಮರ್ಷಿಯಲ್ ನಿರ್ದೇಶಕನಿಗಿಂತ ಭಿನ್ನವೆಂದೆನಿಸಿರಲಿಲ್ಲ. 'ಅವ್ವ' ಈ ದೃಷ್ಟಿಯಿಂದ ಭಿನ್ನವಾಗಿದ್ದರೂ ಕಾದಂಬರಿಯ ಬಿಗು, ಪಾತ್ರಗಳು ಧ್ವನಿಸುವ ವಿವಿಧ ಆಯಾಮ, ಸನ್ನಿವೇಶದ ವಿವರಗಳನ್ನು ಅದೇ ನೆಲೆಯಲ್ಲಿ ಹಿಡಿಯುವುದರಲ್ಲಿ ವಿಫಲರಾಗಿದ್ದಾರೆ. ಲಂಕೇಶರ 'ಮುಸ್ಸಂಜೆಯ ಕಥಾಪ್ರಸಂಗ' ಕಾದಂಬರಿ, ವಸ್ತುವಿನ ಆಯ್ಕೆ-ಪಾತ್ರ ಸೃಷ್ಟಿಯಲ್ಲಿ ಹಾಗೂ ಸನ್ನಿವೇಶದ ವಿವರವನ್ನು ಕಟ್ಟಿಕೊಡುವಲ್ಲಿ ಎತ್ತುವ ಪ್ರಶ್ನೆಗಳ ಮೂಲಕ ಇಂದಿಗೂ ಪ್ರಸ್ತುತತೆಯನ್ನು ಕಾಯ್ದುಕೊಂಡು ಬಂದಿದೆಯೆಂಬುದು ಮುಖ್ಯ ಅಂಶ. ಕಾದಂಬರಿಯಲ್ಲಿ ಇರುವ ಬಿಗು ಚಲನಚಿತ್ರದಲ್ಲಿ ಇಲ್ಲವೆಂದು ಅನಿಸುತ್ತದೆ. ಕಾದಂಬರಿಯಲ್ಲಿ ಮೂಡಿಬರುವ ಸಂದೇಶಗಳು ಚಿತ್ರದಲ್ಲಿ ಕೇವಲ ಸಂಭಾಷಣೆಯ ಮೂಲಕ ವ್ಯಕ್ತವಾಗಿವೆ.

ಗಂಡಸರ ಕುತಂತ್ರಕ್ಕೆ ಸೊಪ್ಪು ಹಾಕದ ರಂಗವ್ವ ಬೈಗುಳಗಳ ಮೂಲಕ ತನ್ನ ಅಸ್ತಿತ್ವವನ್ನು ಬಲಪಡಿಸಿಕೊಳ್ಳುತ್ತಾಳೆ. ಒಂಟಿ ಮಹಿಳೆಯೊಬ್ಬಳು ಗಂಡಸರ ಪ್ರಪಂಚದಲ್ಲಿ ಧೈರ್ಯದಿಂದ ತನಗೆ ಎದುರಾಗುವ ಸಮಸ್ಯೆಗಳನ್ನು ಬೇಕಾದಾಗ ತನ್ನದೇ ಆದ ವಿಶಿಷ್ಟ ರೀತಿಯಲ್ಲಿ ಎದುರಿಸುತ್ತಾಳೆ. ಬಡ್ಡಿ ಹಣವನ್ನು ವಸೂಲಿ ಮಾಡುವ ಸಂದರ್ಭಗಳಲ್ಲಿ ಊರಿನ ಗಂಡಸರ ಕುತಂತ್ರಕ್ಕೆ ಹೆದರದೇ ತನ್ನ ಭಾಷೆಯಲ್ಲಿ ಝಾಡಿಸುತ್ತಾಳೆ. ಜಾತಿ ಜನ ಪ್ರತಿಭಟಿಸಿದಾಗ ಕೈಯಲ್ಲಿ ಮಚ್ಚು ಹಿಡಿದು ಬ್ಯಾಡರ ಮಂಜ ಹಾಗೂ ತನ್ನ ಮಗಳ ಪ್ರೀತಿಯನ್ನು ಒಪ್ಪಿ ಮನೆಯೊಳಗೆ ಸೇರಿಸಿ, ಮನೆಯ ಮುಂದೆ ನೆರೆದಿದ್ದ ಜನರಿಗೆ ಸವಾಲು ಹಾಕುತ್ತಾಳೆ. ಹಸು ಹೆಣ್ಣು ಕರು ಹಾಕಿದಾಗ ಸಂತೋಷ ಪಡುವ ಜನ ಹೆಣ್ಣುಮಕ್ಕಳು ಹುಟ್ಟಿದರೆ ತೋರುವ ಅಸಡ್ಡೆ, ಸಾವಂತ್ರಿಯ ಗೆಳತಿಯ ಸಾವಿನ ಪ್ರಸಂಗದಲ್ಲಿ ಆಕೆ ವಾಂತಿ ಮಾಡಿಕೊಂಡಿದ್ದನ್ನು ಪ್ರಚಾರ ಮಾಡುವುದು, ಶಾಲೆಗೆ ಬರುವ ಹೆಣ್ಣುಮಕ್ಕಳ ಮೈ ಮುಟ್ಟುವ ಮೇಷ್ಟ್ರು-ಇಂತಹ ಘಟನೆಗಳ ಮೂಲಕ ಸಮಾಜದಲ್ಲಿ ಮಹಿಳೆಯರ ಸ್ಥಾನಮಾನ ಕುರಿತು ಹೇಳುತ್ತಾ ಕೇಂದ್ರ ಪಾತ್ರವನ್ನು ಬಲಪಡಿಸುವ ಪ್ರಯತ್ನವನ್ನು ಕವಿತಾ ಮಾಡಿದ್ದಾರೆ.

ಪುರುಷರ ನಪುಂಸಕತ್ವ ಅಥವಾ ಲೈಂಗಿಕ ನಿರಾಸಕ್ತಿಯನ್ನು ಹಾಗೂ ಸ್ತ್ರೀಯರ ಲೈಂಗಿಕ ಅಭಿವ್ಯಕ್ತಿಯನ್ನು ಸಹ ಚಿತ್ರ ಕೇಂದ್ರೀಕರಿಸುತ್ತದೆ. ಚಿತ್ರದ ನಾಯಕ ಹಾಗೂ ನಾಯಕಿಯ ಲೈಂಗಿಕ ಅಭಿವ್ಯಕ್ತಿಗೆ ಪ್ರಾಮುಖ್ಯ ನೀಡುವುದರೊಂದಿಗೆ [ಅಗತ್ಯಕ್ಕಿಂತ ಹೆಚ್ಚು, ವ್ಯಾಪಾರ ದೃಷ್ಟಿಕೋನವೂ ಇರುವುದರಿಂದ] ಭರಮಣ್ಣನಿಂದ ಲೈಂಗಿಕ ತೃಪ್ತಿಯನ್ನು ಪಡೆಯದೆ, ಅವನ ಸ್ನೇಹಿತನ ಜೊತೆಯಲ್ಲಿ ಓಡಿಹೋಗಿ, ಆತನಿಂದಲೂ ನಿರಾಸೆಗೊಂಡು ವಾಪಸ್ ಬರುವುದು-ಹೀಗೆ ಮಹಿಳೆಯರ ಲೈಂಗಿಕ ಅತೃಪ್ತಿಯನ್ನು ಚಿತ್ರಿಸಲಾಗಿದೆ. ರಂಗವ್ವನ ಮೇಲೆ ಸೇಡು ತೀರಿಸಿಕೊಳ್ಳಲು ಆಕೆಯ ಮಗಳ ಮೇಲೆ ಅತ್ಯಾಚಾರವೆಸಗುವ ಭರಮಣ್ಣನಂತಹವರ ವಿಕೃತ ಮನೋಭಾವದ ಚಿತ್ರಣವೂ ಇದೆ.

ಎಲ್ಲಾ ಪಾತ್ರಗಳ ಆಯ್ಕೆ ಸಹಜತೆಗೆ ಹತ್ತಿರವಾಗಿದ್ದರೂ, ಕೊರತೆಗಳೂ ಇವೆ. ಕೇಂದ್ರ ಪಾತ್ರದಲ್ಲಿ ಶ್ರುತಿಯವರು ಪಾತ್ರಕ್ಕೆ ಸಾಕಷ್ಟು ಜೀವಂತಿಕೆಯನ್ನು ತುಂಬಲು ಪ್ರಾಮಾಣಿಕ ಪ್ರಯತ್ನ ಮಾಡಿದ್ದಾರಾದರೂ ಹೆಚ್ಚು ಪರಿಣಾಮಕಾರಿಯಾಗಿ ಮೂಡಿಬಂದಿಲ್ಲ.

● ರಾಜೆ

# ಮಾರುವ ವೃತ್ತಿಯ ಮಾನಿನಿಯರು-ಕಥೆ-ವ್ಯಥೆ

● ವೆಂ. ವನಜ

ಹೂವನು ಮಾರುತ
ಹೂವಾಡಗಿತ್ತಿ
ಹಾಡುತ ಬರುತಿಹಳು.

ಎಂದು ಹಾಡಿ ಹೊಗಳಿದ್ದಾರೆ ಕವಿ ರಾಘವ. ಈ ಹಾಡು ಕೇಳುವ ನಾವು ನಮಗೇ ಗೊತ್ತಿಲ್ಲದಂತೆ ಒಂದು ಸ್ವಪ್ನಲೋಕಕ್ಕೆ ಸಾಗಿಬಿಡುತ್ತೇವೆ. ಬಗೆಬಗೆ ಬಣ್ಣದ ವಿವಿಧ ಆಕಾರಗಳ, ಘಮಘಮಿಸುವ ಹೂಗಳ ಬುಟ್ಟಿಯನ್ನು ತಲೆಯ ಮೇಲೆ ಹೊತ್ತು ಮುಂಜಾನೆಯ ಮಂಜಿನ ಮುಸುಕಿನಲ್ಲಿ 'ಹೂ ಬೇಕೇನಮ್ಮ ಹೂ ಮಲ್ಲಿಗೆ, ಜಾಜಿ, ಸಂಪಿಗೆ, ಮರುಗ, ಸೇವಂತಿಗೆ...' ಎಂದು ರಾಗವಾಗಿ ಹಾಡಿ ನಮ್ಮ ಬೆಳಕಿನ ಸಿಹಿಗನಸುಗಳಿಗೆ ಫುಲ್‌ಸ್ಟಾಪ್ ಹಾಕಿ ನಮ್ಮನ್ನು ಮೈಮುರಿದೆದ್ದು ದೈನಂದಿನ ಚಟುವಟಿಕೆಗಳಿಗೆ ಎಳೆದು ತರುವ ಈ ಹೆಣ್ಣು 'ಸುರಲೋಕದ ಅಪ್ಸರೆಯೇ' ಎನ್ನುವಂತೆ ಮನೆಯ ಮುಂದೆ ಹಾದುಹೋಗುತ್ತಾಳೆ. ದೇವಾಧಿದೇವತೆಗಳ ಸಂದೇಶ ಸಾರಲು ಭೂಮಿಯ ಮೇಲೆ ಅವತರಿಸುವ ಪ್ರವಾದಿಯಂತೆ, ತಾನು ತಂದಿರುವ ಬಗೆಬಗೆ ಹೂಗಳನ್ನು ರಾಗವಾಗಿ ಬಗೆಬಗೆಯಾಗಿ ಬಣ್ಣಿಸುತ್ತಾ ಮುಂದೆ ಸಾಗುತ್ತಾಳೆ. ಮುಂಜಾನೆಯ ಮಂಪರು ನಮ್ಮ ಕಣ್ಣಿನಿಂದ ಹರಿಯುತ್ತದೆ. ಘಮ ಘಮಿಸುವ ಹೂ ದೇಹ-ಮನಸ್ಸುಗಳನ್ನು ಮುದಗೊಳಿಸುತ್ತದೆ; ನಾವು ಎಂದಿನಂತೆ ದೈನಂದಿನ ಚಟುವಟಿಕೆಗಳಲ್ಲಿ ಉಲ್ಲಾಸದಿಂದ ತೊಡಗುವಂತೆ ಪ್ರೇರಿಸುತ್ತದೆ. ಇಷ್ಟಕ್ಕೆಲ್ಲಾ ಕಾರಣಳಾದ ಹೂವಾಡಗಿತ್ತಿ ಆ ಕ್ಷಣವೇ ನಮ್ಮ ಕಣ್ಣು ಮನಸ್ಸುಗಳಿಂದ ದೂರವಾಗುತ್ತಾಳೆ. ಮತ್ತೆ ಅವಳ ನೆನಪು-ದರ್ಶನ ಮರುದಿನವೇ!

ಹೀಗೆ ಮೈಮನಗಳಿಂದ ಮರೆಯಾಗುವ ಹೆಣ್ಣುಗಳ ಬದುಕಿನತ್ತ ಒಂದು ನೋಟ ಹರಿಸುವ ಪ್ರಯತ್ನವನ್ನು ನಾವು ಒಮ್ಮೊಮ್ಮೆ ಮಾಡುತ್ತೇವೆ. ಆದರೆ ಅಂಥವರ ಬದುಕಿನ ಒಂದು ಸಮಗ್ರ ನೋಟ ಎಷ್ಟೋ ಬಾರಿ ನಮಗೆ ನಿಲುಕುವುದಿಲ್ಲ. ನಿಲುಕಿದರೂ ಅಲ್ಲಿ ಯಾವುದೇ ಬದಲಾವಣೆಗಾಗಿ ಪ್ರಯತ್ನಗಳು ನಡೆಯುವುದಿಲ್ಲ. ನಡೆದರೂ ಸಂಘಟಿತವಾಗಿರುವುದಿಲ್ಲ. ಅದರಿಂದಾಗಿಯೇ ಅಂಥ ಪ್ರಯತ್ನಗಳು ತಟ್ಟಬೇಕಾದ ಕಡೆ ತಟ್ಟುವುದಿಲ್ಲ ; ಮುಟ್ಟಬೇಕಾದ ಕಡೆ ಮುಟ್ಟುವುದಿಲ್ಲ.

ಹೆಣ್ಣಿನ ಸ್ಥಾನ ಮನೆಯಲ್ಲಿ-ಮಗಳು, ಹೆಂಡತಿ, ತಾಯಿ, ಅತ್ತೆ, ಸೊಸೆ ಮುಂತಾಗಿ-ಎನ್ನುವ ಸಾಂಪ್ರದಾಯಿಕ ಸಮಾಜದಲ್ಲೇ ಇಂದು ಇಂಥ ಹೆಂಗೆಳೆಯರ ಸಂಖ್ಯೆ ದಿನೇ ದಿನೇ ಹೆಚ್ಚುತ್ತಿರುವುದನ್ನು ಒಂದೆಡೆ ಕಾಣುತ್ತಿದ್ದೇವೆ. ಇದೇಕೆ ಹೀಗೆ? ಇವರೇಕೆ ಈ ಸಾಂಪ್ರದಾಯಿಕ ಸಮಾಜದ ನೀತಿ-ನಿಯಮಗಳಿಗೆ ಕಟ್ಟುಪಾಡುಗಳಿಗೆ ಹೊರತಾಗಿದ್ದಾರೆ? ಇದು ಯೋಚಿಸಬೇಕಾದ ಸಂಗತಿ.

ತ್ವರಿತಗತಿಯಲ್ಲಿ ಬೆಳೆಯುತ್ತಿರುವ ನಗರ ಪ್ರದೇಶಗಳು, ತಂತ್ರಜ್ಞಾನ, ಔದ್ಯೋಗೀಕರಣ, ಆರ್ಥಿಕ ಉದಾರವಾದ, ಜಾಗತೀಕರಣಗಳಿಂದಾಗಿ ಅನಿವಾರ್ಯವಾಗುತ್ತಿರುವ ಆರ್ಥಿಕ ವ್ಯವಸ್ಥೆಯ ರಾಚನಿಕ ಹೊಂದಾಣಿಕೆಯ ಪರಿಣಾಮ ಎಂದರೆ ಹೊಸ ಉದ್ಯೋಗಗಳ ಸೃಷ್ಟಿ. ಅದರೊಂದಿಗೆ ಸಾಂಪ್ರದಾಯಿಕ ಆರ್ಥಿಕ ಸಂರಚನೆ ಸಂಪೂರ್ಣವಾಗಲ್ಲ ದಿದ್ದರೂ ಸ್ವಲ್ಪಮಟ್ಟಿಗೆ ಬುಡಮೇಲಾಗಿದೆಯೆಂದರೆ ತಪ್ಪಾಗಲಾರದು. ಈ ಹೊಸವ್ಯವಸ್ಥೆಯಲ್ಲಿ ಹೆಚ್ಚು ಹೆಚ್ಚು ತಾಂತ್ರಿಕ ಮತ್ತು ಔದ್ಯೋಗಿಕ ಕೌಶಲ ಹೊಂದಿರುವವರಿಗೆ ಅವಕಾಶಗಳು ದೊರೆಯುತ್ತಿವೆ. ಆದರೆ ಇದರ ಇನ್ನೊಂದು ಮಗ್ಗುಲಲ್ಲಿ ವಂಚನೆ, ತಾರತಮ್ಯ, ಅನ್ಯಾಯ ಗಳಿಗೊಳಗಾದ ಮತ್ತೊಂದು ವರ್ಗ ಸೃಷ್ಟಿಯಾಗುತ್ತಿದೆ. ಅದೆಂದರೆ ಮಹಿಳೆ, ಚಾರಿತ್ರಿಕ ಕಾರಣಗಳಿಂದಾಗಿ ಶಿಕ್ಷಣದಿಂದ ವಂಚಿತಳಾಗಿಯೇ ಬರುತ್ತಿರುವ ಮಹಿಳೆ ಇಂದಿಗೂ ಹತ್ತು ಹಲವು ಅವಕಾಶಗಳಿಂದ ದೂರವಾಗಿದ್ದಾಳೆ. ತಂತ್ರಜ್ಞಾನ ಹೆಣ್ಣಿಗಲ್ಲ ಎಂದೇ ಪರಿಭಾವಿಸುವ ಸಮಾಜದಲ್ಲಿ ಅವಳು ತಾಂತ್ರಿಕ ಕೌಶಲದಿಂದ ಮಾತ್ರವೇ ಅಲ್ಲ, ಅಕ್ಷರ ಜ್ಞಾನದಿಂದಲೂ ಇದುವರೆಗೆ ದೂರವಾಗುತ್ತಲೇ ಬಂದಿದ್ದಾಳೆ. ಅದರಿಂದಲೇ ಬದಲಾವಣೆಯತ್ತ ಮುಖ ಮಾಡಿರುವ ಈ ಸಮಾಜದಲ್ಲಿ ಕುಟುಂಬ ಮತ್ತು ಉದ್ಯೋಗದ ವಿವಿಧ ಕ್ಷೇತ್ರಗಳಲ್ಲಿ ಅವಳು ಶೋಷಿತ ವರ್ಗಕ್ಕೆ ಸೇರಿಹೋಗುತ್ತಾಳೆ.

ಹೆಣ್ಣು ಆರ್ಥಿಕ ಕ್ಷೇತ್ರದಲ್ಲಿ ಕಾಲಿಡುತ್ತಿರುವುದು ಈಗಲ್ಲ, ಮಾನವ ಇತಿಹಾಸದ ಆರಂಭದಿಂದಲೂ ಅವಳು ತನ್ನದೇ ರೀತಿಯಲ್ಲಿ ನೀಡಿದ ಕೊಡುಗೆ ಅಪಾರ. ಆದರೆ ಇದು ಕುಟುಂಬ, ಕೃಷಿ ಮತ್ತಿತರ ಅಸಂಘಟಿತ ವಲಯಗಳಲ್ಲೇ ಹೆಚ್ಚು ಕೇಂದ್ರೀಕೃತವಾಗಿದ್ದು ರಾಷ್ಟ್ರದ ಒಟ್ಟು ಉತ್ಪಾದನೆಯ ಲೆಕ್ಕಪತ್ರದಲ್ಲಿ ಇಂದಿಗೂ ದಾಖಲಾಗದೆ ಉಳಿದಿರುವುದು ಒಂದು ವಿಪರ್ಯಾಸ. ಅಂಥದೊಂದು ಅಸಂಘಟಿತ ವಲಯ ಈ ಸಣ್ಣ ಮಾರಾಟಗಾರ್ತಿ ಮಹಿಳೆಯರು. ಒಂದು ಕಾಲದಲ್ಲಿ ಬೆರಳೆಣಿಕೆಯಷ್ಟಿದ್ದ ರೆನ್ನಲಾದ ಈ ಮಹಿಳೆಯರ ಸಂಖ್ಯೆ ಈಗ ದಿನೇ ದಿನೇ ಹೆಚ್ಚುತ್ತಿದೆ. ಇವರು ಹೂವು, ಹಣ್ಣು, ತರಕಾರಿಗಳಷ್ಟೇ ಏಕೆ, ವೀಳೆಯದೆಲೆ, ಈರುಳ್ಳಿ, ಬೆಳ್ಳುಳ್ಳಿ, ದಿನಸಿ ವಸ್ತುಗಳು, ಪೂಜಾ ಸಾಮಗ್ರಿಗಳಾದ ಗಂಧದಕಡ್ಡಿ, ಕರ್ಪೂರ, ತೆಂಗಿನಕಾಯಿ, ಅಲಂಕಾರಿಕ ವಸ್ತುಗಳು, ಉಡುಪುಗಳು ಮುಂತಾದವುಗಳ ಮಾರಾಟದಲ್ಲಿ ತೊಡಗಿರುವುದಲ್ಲದೆ ಅಲ್ಲಲ್ಲಿ ಮೀನು-ಮಾಂಸದ ವ್ಯಾಪಾರ ಮಾಡುತ್ತಿರುವುದನ್ನು ಕಾಣಬಹುದು.

ಸಾಂಪ್ರದಾಯಿಕ ಸಮಾಜದಿಂದ ನಿಷೇಧಿತ ವಲಯದಿಂದ ವ್ಯಾಪಾರ ಕ್ಷೇತ್ರದಲ್ಲಿ ಇಂದು ಹೆಚ್ಚು ಸಂಖ್ಯೆಯಲ್ಲಿ ಮಹಿಳೆಯರು ಕಾಲಿಡುತ್ತಿರುವು ದೇಕೆ? ಇವರ ಹಿನ್ನೆಲೆ ಏನು? ಇಂಥ ಹಲವು ಪ್ರಶ್ನೆಗಳೊಂದಿಗೆ ಹೊರಟು ಮೈಸೂರು ನಗರಪ್ರದೇಶದಲ್ಲಿ ತೊಂಬತ್ತರ ದಶಕದಲ್ಲಿ ನಡೆಸಿದ ಅಧ್ಯಯನದಿಂದ ಹಲವು ಅಂಶಗಳು ಬೆಳಕಿಗೆ ಬಂದಿವೆ. ಇವರಲ್ಲಿ ಕೆಲವರು ವ್ಯಾಪಾರವನ್ನು ತಮ್ಮ ಜಾತಿ ವೃತ್ತಿಯೆಂಬ ಒಂದೇ ಕಾರಣದಿಂದ ಹೂವಿನ ಮಾರಾಟಕ್ಕಿಳಿದಿದ್ದರು. ಬದುಕಿನ ಸಾಗರದಲ್ಲಿ ಈಜು ಬಾರದಿದ್ದವರಿಗೆ ಹುಲ್ಲುಕಡ್ಡಿಯೂ ಆಸರೆಯಾದಂತೆ, ಎಲ್ಲೆಡೆಯೂ ಪ್ರವೇಶದ್ವಾರಗಳು ಮುಚ್ಚಿದಾಗ ತೆರೆದುಳಿದಿದ್ದ ಒಂದೇ ದಾರಿಯಾಗಿತ್ತು ಈ ವ್ಯಾಪಾರ. ಇವರಲ್ಲಿ ಹೆಚ್ಚಿನವರು ಕಡುಬಡತನದಿಂದ ನೊಂದು ಬೆಂದ ಕುಟುಂಬದಿಂದ ಬಂದವರು. ತಂದೆ ತಾಯಿಗೆ ಆರ್ಥಿಕ ನೆರವು ನೀಡಲು, ಕುಟುಂಬದಲ್ಲಿ ದುಡಿಯುವ ಕೈಗಳು ಕಡಿಮೆಯಾಗಿ, ಹಸಿದ ಹೊಟ್ಟೆಗಳು ಹೆಚ್ಚಾದಾಗ ಬೇರೆ ದಾರಿ ಕಾಣದೆ ಬಂದವರು. ಕೌಟುಂಬಿಕ ಜೀವನದಲ್ಲಿ ಆಕಸ್ಮಿಕವಾಗಿ ಎರಗಿ ಬಂದ ದುರಂತಗಳು, ಕ್ರೌರ್ಯ, ದಿಕ್ಕಿಲ್ಲದೆ ಬೀದಿಬೀದಿಯಲ್ಲಿ ಅಲೆದಾಡುವಂತಾದಾಗ, ಗಂಡನಿಂದ ಹಿಂಸೆ, ಶೋಷಣೆ, ವಂಚನೆಗೆ ಗುರಿಯಾದಾಗ, ಆಕಸ್ಮಿಕ ಸಾವು-ನೋವುಗಳು ದಿಕ್ಕೆಡಿಸಿದ ಸಂದರ್ಭಗಳಲ್ಲಿ ಇವರು ಕಂಡುಕೊಂಡ ದಾರಿ ಇದಾಗಿತ್ತು.

ಈ ಮಹಿಳೆಯರೆಲ್ಲರಿಗೂ ಒಂದು ನಿರ್ದಿಷ್ಟ ಸ್ಥಳ ಸಾಮಾನ್ಯವಾಗಿ ಇರುವುದಿಲ್ಲ. ಸ್ಥಳ ಇದ್ದ ಕಡೆ ವ್ಯಾಪಾರ ಇಲ್ಲ. ಕೆಲವರು ತಲೆ ಮೇಲೆ ಬುಟ್ಟಿ ಹೊತ್ತು ಮೈಲಿಗಟ್ಟಲೆ ನಡೆದು, ಮನೆಮನೆಯ ಮೆಟ್ಟಿಲುಗಳ ಹತ್ತಿಳಿದು, ಗಲ್ಲಿಗಲ್ಲಿಗಳಲ್ಲಿ ತಿರುಗಿದರೆ, ಇನ್ನು ಕೆಲವರು ತಾವೇ ನಿಗದಿಪಡಿಸಿಕೊಂಡ ಸಮಯದಲ್ಲಿ ರಸ್ತೆಯ ಫುಟ್‌ಪಾತ್‌ಗಳಲ್ಲಿ ಕುಳಿತು ಮಾರುವುದನ್ನು ಕಾಣುತ್ತೇವೆ. ಮತ್ತೆ ಕೆಲವರು ಅದು ಹೇಗೋ ದೊಡ್ಡ-ಚಿಕ್ಕ ಮಾರುಕಟ್ಟೆಗಳಲ್ಲಿ ಕುಳಿತುಕೊಳ್ಳುವ ಅವಕಾಶಗಳನ್ನು ಪಡೆದುಕೊಂಡಿದ್ದಾರೆ. ಇವುಗಳ ಹಿಂದೆ ಅವರದೇ ಆದ ಕತೆಗಳಿರುತ್ತವೆ. ಮಾರುಕಟ್ಟೆಗಳಲ್ಲಿ ಕುಳಿತುಕೊಳ್ಳುವ ಮಹಿಳೆಯರಿಗೆ ಮಳಿಗೆಗಳು ಇರುತ್ತವೆಂದು ಭಾವಿಸಿದರೆ ತಪ್ಪಾದೀತು. ಇಲ್ಲಿ ಮಳಿಗೆಗಳು ಬೆರಳೆಣಿಕೆಯಷ್ಟು ಮಹಿಳೆಯರಿಗೆ ಮಾತ್ರ ಲಭ್ಯ. ಉಳಿದವರು ಯಾರ್ಯಾರದೋ ಮಳಿಗೆಗಳ ಮುಂದೆ ಕುಳಿತುಕೊಳ್ಳುವ ಪರಿಸ್ಥಿತಿ. ಬಿಸಿಲು-ಮಳೆಗಳಿಂದ ರಕ್ಷಣೆ ಪಡೆಯಲು ಬೇಕಾದ ತಲೆಯ ಮೇಲಿನ ಸೂರಿನ ಕೊರತೆ ಹಲವರಿಗೆ.

ಮುಂಜಾನೆಯೇ ತಮ್ಮ ಮಾಲುಗಳನ್ನು ಹೊತ್ತು ತರುವ ಇವರಿಗೆ ಅಂದು ವ್ಯಾಪಾರ ಚೆನ್ನಾಗಿದ್ದು ರಾತ್ರಿಯ ವೇಳೆಗೆ ಮಾಲು ಮಾರಾಟವಾದರೆ ಚಿಂತೆಯಿಲ್ಲ. ಇಲ್ಲವಾದಲ್ಲಿ ಸಂಜೆಯಾದಂತೆ ಇವರ ಮನ ಚಿಂತೆ-ಆತಂಕ-ದುಗುಡಗಳ ಗೂಡಾಗಿಬಿಡುತ್ತದೆ. ರಾತ್ರಿಯಾದಂತೆ ಇಡೀ ದೇಹ-ಮನಸ್ಸುಗಳಿಗೆ ಕಾರ್ಮೋಡ ಕವಿದ ಅನುಭವ. ಕಾರಣ ಎರಡು. ಒಂದು, ಮಾಲುಗಳು ಮರುದಿನದ ವ್ಯಾಪಾರಕ್ಕೆ ಹೆಚ್ಚು ಯೋಗ್ಯವಾಗಿರುವುದಿಲ್ಲ. ಎರಡನೆಯದಾಗಿ, ಅವುಗಳನ್ನು ರಾತ್ರಿ ಅಲ್ಲಿಯೇ ಬಿಟ್ಟು ಮನೆಗೆ ತೆರಳುವಂತಿಲ್ಲ. ಮನೆಗೆ ಅವುಗಳನ್ನು ಹೊತ್ತೇ ಸಾಗಬೇಕು. ಆಯಾಸಗೊಂಡ ದೇಹ ಇದಕ್ಕೆ ಸಿದ್ಧವಾಗಿರುವುದಿಲ್ಲ.

ಆಯಾಸ ಎಂದ ಕೂಡಲೆ ನೆನಪಾಯಿತು. ಈ ಮಹಿಳೆಯರ ದುಡಿಮೆಯ ಕಾಲಾವಧಿಯ ಅಂದಾಜಿದೆಯೆ? ಸಂಘಟಿತ ವಲಯಗಳಲ್ಲಿ ದಿನದಲ್ಲಿ ಆರರಿಂದ ಎಂಟು ಗಂಟೆಗಳು ದುಡಿಮೆಗೆಂದು ನಿಗದಿಪಡಿಸಲಾಗುತ್ತದೆ. ಆದರೆ ಅಸಂಘಟಿತ ವಲಯಗಳಲ್ಲಿ ದುಡಿಮೆಯ ಕಾಲಾವಧಿ ಎಷ್ಟೋ ಕಡೆ ನಿಗದಿತವಾಗಿರುವುದಿಲ್ಲ. ಎಷ್ಟೋ ಗೃಹಿಣಿಯರು ಮನೆಯಲ್ಲಿ 12 ರಿಂದ 14 ಗಂಟೆಗಳ ಕಾಲ ದುಡಿಯುವುದನ್ನು ಕಾಣುತ್ತೇವೆ. ಆದರೆ ಈ ವ್ಯಾಪಾರಿ ಮಹಿಳೆಯರು ಕೋಳಿ ಕೂಗುವ ಮೊದಲೇ ಎದ್ದು ಅಂದಿನ ವ್ಯಾಪಾರಕ್ಕೆ ಬೇಕಾದ ಮಾಲುಗಳನ್ನು ತರಲು ಅಥವಾ ಖರೀದಿಸಲೆಂದು ಮನೆ ಬಿಡುವವರು. ಕೆಲವರು ಆಟೋಗಳನ್ನು ನಿಗದಿಪಡಿಸಿಕೊಂಡಿದ್ದರೆ, ಇನ್ನೂ ಕೆಲವರು ಹಳ್ಳಿಗಳಿಂದ ಬರುವ ಟೆಂಪೊಗಳನ್ನು ಹಿಡಿಯುತ್ತಾರೆ. ಮತ್ತೆ ಕೆಲವರು ಇದ್ಯಾವುದೂ ಇಲ್ಲದೆ ಇತರರ ಜೊತೆಗೂಡಿ ಮನೆಯಿಂದ ನಡೆದೇ ಸಗಟು ವ್ಯಾಪಾರದ ಮಾರುಕಟ್ಟೆಗಳನ್ನು ತಲುಪುತ್ತಾರೆ. ಅಲ್ಲಿಂದ ಸಗಟು ಬೆಲೆಯಲ್ಲಿ ಮಾಲುಗಳನ್ನು ಕೊಂಡು ತಮ್ಮ ವ್ಯಾಪಾರದ ನಿರ್ದಿಷ್ಟ ಸ್ಥಳಕ್ಕೆ ಧಾವಿಸುತ್ತಾರೆ. ಕೆಲವರು ಬೆಳಗಿನ ಉಪಾಹಾರ ಮುಗಿಸಿಯೇ ಮಾರುಕಟ್ಟೆಗೆ ಬಂದರೆ, ಇನ್ನೂ ಕೆಲವರು ಹೋಟೆಲ್ಲುಗಳಲ್ಲಿ ಏನನ್ನಾದರೂ ತಿಂದು ವ್ಯಾಪಾರದಲ್ಲಿ ತೊಡಗುತ್ತಾರೆ. ಇಷ್ಟರಲ್ಲಿ ಬೆಳಗಿನ 7-8 ಗಂಟೆ ಆಗಿರುತ್ತದೆಂದಾದರೆ ಅವರು ಮನೆಗೆ ಮರಳುವುದು ರಾತ್ರಿ ಹತ್ತು ಗಂಟೆಗೇ! ಹೀಗೆ ಮನೆ ಸೇರಿದವರಿಗೆ ಅಲ್ಲಿ ವಿರಾಮ ಎಂದು ತಿಳಿದಿದ್ದರೆ ಅದು ತಪ್ಪಾದೀತು. ಅಲ್ಲಿ ಅವರ ಮನೆಗೆಲಸ ಮತ್ತೆ ಆರಂಭ. ಅಡಿಗೆಮಾಡಿ ಊಟಮುಗಿಸಿ ಮಲಗುವ ವೇಳೆಗೆ ರಾತ್ರಿ ಹನ್ನೆರಡು ಗಂಟೆ ದಾಟಿರುತ್ತದೆ. ಕೆಲವರು ಮಧ್ಯಾಹ್ನ ಮನೆಗೆ ಬರುತ್ತಾರೆ. ಅದು ಊಟಕ್ಕಾಗಿ ಅಲ್ಲ, ಬೇರೆಯವರಿಗೆ ಅಡಿಗೆ ಮಾಡಲೆಂದು! ಮನೆಗೆಲಸ ಮುಗಿದ ನಂತರ ಮತ್ತೆ ಮಾರುಕಟ್ಟೆಗೆ ಆಗಮನ! ಹೀಗೆ ಹಗಲಿರುಳೂ ದುಡಿಯುವ ಇವರಿಗೆ ಆರಾಮ-ವಿರಾಮಗಳ ಪರಿಚಯ ಇಲ್ಲವೆಂದೇ ಹೇಳಬೇಕು.



ಹೀಗೆ ದುಡಿದು ದಣಿಯುವ ಜೀವಗಳಿಗೆ ಮನೆಗಳು ನೆಮ್ಮದಿ ಕೊಡುವ ತಾಣಗಳಾಗಿವೆಯೆ ಎಂದರೆ, ಕೆಲವರಿಗೆ ಅದು ಹಿಂಸೆಯ ಗೂಡಾಗಿದೆ. ದಣಿದ ದೇಹಕ್ಕೆ ನೆಮ್ಮದಿಯ ನಿದ್ದೆಯೂ ಇಲ್ಲ. ಕುಡಿದ ಗಂಡನ ಕಾಟ, ಲೈಂಗಿಕ ಹಿಂಸೆ, ಮಕ್ಕಳ ಯೋಗಕ್ಷೇಮದ ಹೊಣೆಗಾರಿಕೆ, ಬೆಳೆದ ಮಕ್ಕಳ ಸಮಸ್ಯೆ ಮುಂತಾಗಿ ಹತ್ತು ಹಲವು ಸಮಸ್ಯೆಗಳ ಜೊತೆಗೆ ಮರುದಿನದ ವ್ಯಾಪಾರಕ್ಕೆ ಅಗತ್ಯವಾದ ಹಣಕಾಸಿನ ಚಿಂತೆ. ವ್ಯಾಪಾರ ಚೆನ್ನಾಗಿದ್ದರೆ ನಾಳಿನ ಬಂಡವಾಳದ ಚಿಂತೆ ಇಲ್ಲ ಎನ್ನಬಹುದಾದರೂ ಶೇಕಡ 80 ಮಹಿಳೆಯರು ಸಾಲಗಾರರೇ. ಇವರು ಸಾಲಕ್ಕಾಗಿ ದಳ್ಳಾಳಿಗಳು, ವೃತ್ತಿಪರರು, ದೊಡ್ಡ ದೊಡ್ಡ ವ್ಯಾಪಾರಿಗಳ ಬಳಿ ಹೋಗುತ್ತಾರೆ. ಉದಾಹರಣೆಗೆ, ಮಂಡಿಮೊಹಲ್ಲ ಮಾರುಕಟ್ಟೆಯ ಮಹಿಳೆಯರು ಒಂದುಸಾವಿರ ರೂಪಾಯಿಗಳಿಗೆ ಮೂರು ತಿಂಗಳಿಗೆ ದಿನಕ್ಕೆ 10 ರೂಪಾಯಿಗಳ ಬಡ್ಡಿದರದಲ್ಲಿ ಸಾಲ ಪಡೆಯುತ್ತಿದ್ದರು. ಈ ಬಡ್ಡಿದರ ಒಬ್ಬರಿಂದೊಬ್ಬರಿಗೆ ಸ್ವಲ್ಪಮಟ್ಟಿನ ವ್ಯತ್ಯಾಸ ಹೊಂದಿರುತ್ತದೆ. ಅಂದಿನ ವ್ಯಾಪಾರ ಚೆನ್ನಾಗಿಲ್ಲದಿದ್ದಲ್ಲಿ ಸಾಲದ ಹಣ ಕೊಡಲಾಗದೆ ಅದರ ಹೊರೆ ಮರುದಿನಕ್ಕೆ ಬೀಳುತ್ತದೆ. ಈ ಚಿಂತೆ ವ್ಯಾಪಾರೀ ಮಹಿಳೆಯರಲ್ಲಿ ಹೆಚ್ಚಿನವರನ್ನು ಕಾಡುತ್ತಿರುತ್ತದೆ.

ಇದು ಕೇವಲ ಸಾಲದ ಪ್ರಶ್ನೆ ಆಗಿರದೆ ಅವರ ಹೊಟ್ಟೆಯ ಪ್ರಶ್ನೆಯೂ ಅಗಿರುತ್ತದೆ. ತಮಗೆ ಲಾಭ ಬಂದ ದಿನ ಹೊಟ್ಟೆ ತುಂಬಾ ಊಟ, ಇಲ್ಲವಾದರೆ ನೀರು ಕುಡಿದೇ ಮಲಗುವ ಪರಿಸ್ಥಿತಿ. ಚಿಕ್ಕ ಮಾರ್ಕೆಟ್ಟಿನ ವ್ಯಾಪಾರಿ ಮಹಿಳೆಯೊಬ್ಬರು ಹತ್ತಿರದ ತನ್ನ ಮನೆಗೆ ನನ್ನನ್ನು ಕರೆದೊಯ್ದು ಅಡಿಗೆ ಮನೆಯ ಪ್ರತಿಯೊಂದು ಡಬ್ಬವೂ ಖಾಲಿಯಿದ್ದುದನ್ನು ತೆಗೆದು ತೋರಿಸಿದ್ದುದು ಕರುಳು ಹಿಂಡುವ ಸಂಗತಿ ಆಗಿದ್ದಂತೆಯೇ ಅದೊಂದು ಮರೆಯಲಾಗದ ನೆನಪು. ಇಂಥವರಿಗೆ ಸಾಲದ ಹೊರೆ ಹೆಚ್ಚುವುದು ಮಾತ್ರವಲ್ಲ, ವ್ಯಾಪಾರವನ್ನೇ ಕೈಬಿಡಬೇಕಾದ ಪರಿಸ್ಥಿತಿ. ಆಹಾರದ ಕೊರತೆಯಿಂದ ದೇಹ, ಸದಾ ಚಿಂತೆಯಿಂದ ಬೇಯುವ ಮನಸ್ಸುಗಳಿಂದ ಆರೋಗ್ಯದ ಕೊರತೆ, ಅರೆಹೊಟ್ಟೆಯ ಊಟ, ಚಿಂತೆಯ ಹೊರೆಯಿಂದ

ಬಾಡಿದ ಮುಖ, ಬಡಕಲು ದೇಹದ ಈ ಮಹಿಳೆಯರ ಬದುಕು ಬಲು ದುಸ್ತರ.

ಇಷ್ಟೇ ಸಾಲದೆಂಬಂತೆ, ಸಾಲಗಾರರ ಕಾಟದೊಂದಿಗೆ ಅಧಿಕಾರಿಗಳು ಹಾಗೂ ಅಧಿಕಾರೇತರರಿಂದಲೂ ಹಣಕ್ಕಾಗಿ ತಗಾದೆಯನ್ನು ಹಲವರು ಅನುಭವಿಸುತ್ತಾರೆ. ಮಾರುಕಟ್ಟೆಗಳಲ್ಲಿ ವ್ಯಾಪಾರ ಮಾಡುವವರು ಕಡ್ಡಾಯವಾಗಿ ಸುಂಕವನ್ನು ಕೊಡಬೇಕಾಗುತ್ತದೆ. ಇದರೊಂದಿಗೆ ಪೊಲೀಸರಿಗೂ ಕೊಡಬೇಕಾದ ಪರಿಸ್ಥಿತಿ ಕೆಲವರಿಗೆ ಕೆಲವು ಕಡೆಗಳಲ್ಲಿರುತ್ತದೆ. ಕೆಲವರು ಕೊಟ್ಟ ಹಣಕ್ಕಿಂತ ಕಡಿಮೆ ಮೊತ್ತಕ್ಕೆ ರಸೀದಿ ಪಡೆಯುತ್ತಾರೆ. ಕಾರಣ ಕೇಳಿದಾಗ, ತಾವೇ ಖುಷಿಯಿಂದ ಕೊಡುತ್ತೇವೆಂದೋ ಅಥವಾ ಅವರು ರಸೀದಿ ಕೊಡುವುದೇ ಅಷ್ಟು ಹಣಕ್ಕೆಂದೋ ಸಮಾಧಾನದ ಮಾತಾಡುವ ಈ ಮಹಿಳೆಯರು ತಾವು ಮಾರಾಟಕ್ಕಿಟ್ಟ ಮಾಲುಗಳನ್ನು ಅವರಿಗೆ ಪುಕ್ಕಟೆಯಾಗಿ ಕೊಡುವುದುಂಟು. ಇದರ ಬಗ್ಗೆ ಕೇಳಿದರೆ ತಲೆಕೆಡಿಸಿಕೊಳ್ಳದಿರುವುದೇ ಹೆಚ್ಚು.

ಉತ್ತಮ ಕೌಟುಂಬಿಕ ಹಿನ್ನೆಲೆಯಿರದ ಬಡತನದಿಂದ ನೊಂದು ಬೆಂದ ಈ ಮಹಿಳೆಯರಲ್ಲಿ ಎಷ್ಟೋ ಮಂದಿ ತಲೆಯ ಮೇಲೊಂದು ಸೂರಿಲ್ಲದವರು. ರಾತ್ರಿಯಾದರೆ ಎಲ್ಲಿ ಮಲಗುವುದೆಂದು ತಿಳಿಯದವರು. ನನ್ನವರು-ತನ್ನವರೆನ್ನುವವರಿಲ್ಲದೆ ದಿಕ್ಕೆಟ್ಟ ಪರಿಸ್ಥಿತಿಯಲ್ಲಿರುವವರು. ಹಲವರು ಇಂಥವರಿಗೆ ದಿನದ ಇಪ್ಪತ್ನಾಲ್ಕು ಗಂಟೆಗಳೂ ಮಾರ್ಕೆಟ್ಟುಗಳೇ ಸರ್ವಸ್ವ. ರಾತ್ರಿಯಲ್ಲೂ ಮಾರ್ಕೆಟ್ಟುಗಳಲ್ಲಿ ಮಲಗುವ ಇವರು ಮರುದಿನ ಎಂದಿನಂತೆ ತಮ್ಮ ಕಾಯಕದಲ್ಲಿ ತೊಡಗುತ್ತಾರೆ. ಇಂಥವರಿಗೆ ಮಲಗಲು ಸುರಕ್ಷಿತ ಸ್ಥಳ, ಸ್ನಾನಗೃಹ, ಶೌಚಾಲಯ, ಬೆಳಕಿನ ವ್ಯವಸ್ಥೆ ಮುಂತಾದವುಗಳ ಕೊರತೆ ಕಣ್ಣಿಗೆ ರಾಚುತ್ತದೆ. ಸುಂಕವನ್ನು ಬಿಡದೆ ವಸೂಲಿ ಮಾಡುವ ಸರಕಾರದ ಗಮನ ಇದರತ್ತ ಹರಿಯಬೇಕಾಗಿದೆ. ಕೇವಲ ಈ ಸವಲತ್ತುಗಳನ್ನು ಮಾತ್ರ ಒದಗಿಸಿ ಕೊಟ್ಟರೆ ಸಾಲದು, ಈ ಬಾಡಿದ ಮುಖಗಳಲ್ಲಿ ಮತ್ತೆ ಜೀವಕಳೆ ತುಂಬಲು, ತಾವೇ ಮಾರುವ ಹೂ ಹಾರಗಳಲ್ಲಿ ಒಂದು ತುಂಡು ಕತ್ತರಿಸಿ ತಮ್ಮ ಬರಿದಾದ ಮುಡಿಗೇರಿಸುವಂತಾಗಲು, ತಾವು ದಿನವೂ ಮಾರುವ ತರಕಾರಿಗಳಲ್ಲಿ ಒಂದಷ್ಟನ್ನು ತಾವೇ ತಿಂದು ಆರೋಗ್ಯವಂತರಾಗಲು, ಸಾಲ ಕೊಡುವ ದಳ್ಳಾಳಿಗಳ ಕಪಿಮುಷ್ಠಿಯಿಂದ ಮುಕ್ತರಾಗಲು, ಬದುಕಿನಲ್ಲಿ ಸ್ವಲ್ಪವಾದರೂ ನೆಮ್ಮದಿ, ಸುಖವನ್ನು ಕಾಣಲು ಸರಕಾರ ಇವರಿಗಾಗಿ ವಿಶೇಷ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಬೇಕು. ಅವೆಂದರೆ, ಸುಲಭದರದಲ್ಲಿ ಸಾಲಸೌಲಭ್ಯ, ಸಹಾಯಧನದ ಸೌಲಭ್ಯ, ವ್ಯಾಪಾರದ ಸ್ಥಳಗಳಲ್ಲಿ ಅವರಿಗೆ ಬಿಸಿಲು-ಮಳೆಗಳಿಂದ ರಕ್ಷಣೆ ಸಿಗುವಂತೆ ಕಟ್ಟಡಗಳ ನಿರ್ಮಾಣ, ಸುಲಭ ದರದಲ್ಲಿ ಮಳಿಗೆಗಳ ಲಭ್ಯತೆ. ಶೌಚಾಲಯಗಳ ನಿರ್ಮಾಣ ಮತ್ತವುಗಳ ಸ್ವಚ್ಛತೆ, ಕುಡಿಯುವ ನೀರು, ಬೆಳಕುಗಳ ವ್ಯವಸ್ಥೆ, ಮಾರಾಟವಾಗದೆ ಉಳಿದ ಮಾಲುಗಳ ಶೇಖರಣೆಗಾಗಿ ಸುರಕ್ಷಿತತೆಗಾಗಿ ವ್ಯವಸ್ಥೆ, ಪೊಲೀಸರು, ಅಧಿಕಾರಿಗಳು ಮತ್ತು ದಳ್ಳಾಳಿಗಳ ಕಾಟದಿಂದ ಮುಕ್ತಿ, ಪುಂಡುಪೋಕರಿಗಳು, ಮತ್ತಿತರ ಸಮಾಜವಿರೋಧಿ ಶಕ್ತಿಗಳಿಂದಾಗುವ ಲೈಂಗಿಕ ಶೋಷಣೆ ಮುಂತಾದವುಗಳಿಂದ ರಕ್ಷಣೆ-ಹೀಗೆ ಹತ್ತು ಹಲವಾರು ದಿಕ್ಕಿನಲ್ಲಿ ಸರಕಾರ ಗಮನ ಹರಿಸಬೇಕಾಗಿದೆ.

ಮಾರುವ ವೃತ್ತಿಯ ಮಹಿಳೆಯರು ಅಲ್ಲಲ್ಲಿ ಸಂಘಟಿತರಾದಂತೆ ಕಂಡರೂ ಮೈಸೂರಿನಲ್ಲಿ ಮಾತ್ರವಲ್ಲ, ಹಲವಾರು ಕಡೆಗಳಲ್ಲಿ ಸಂಘಟಿತರಾಗುವ ನಿಟ್ಟಿನಲ್ಲಿ ಯೋಚಿಸಿದಂತಿಲ್ಲ. ಇವರಿಗೆ ಸಂಘಟನೆಯ ಅಗತ್ಯ ಮತ್ತು ಹೋರಾಟದ ಪಾಠಗಳನ್ನು ತಿಳಿಸಿ ಹೇಳುವ ಕೆಲಸ ಇಂದಾಗಬೇಕಿದೆ. ಇಂಥ ಕೆಲಸಗಳಿಗೆ ಸರಕಾರೇತರ ಸಂಸ್ಥೆಗಳು ಮುಂದಾಗಬೇಕಿದೆ. ವ್ಯಾಪಾರದ ಗಂಧಗಾಳಿಯೂ ಇಲ್ಲದೆ ಮಾರುಕಟ್ಟೆಯನ್ನು ಪ್ರವೇಶಿಸಿದ ಇವರಿಗೆ ವೃತ್ತಿಕೌಶಲ, ವೃತ್ತಿಪರತೆಗಳನ್ನೂ ಕಲಿಸಬೇಕಾಗಿದೆ. ಇವರು ವೃತ್ತಿಯಲ್ಲಿ ಮುಂದುವರಿಯಲು ಅಡೆತಡೆಗಳನ್ನು ಹಾಕುವ ಪುರುಷಪ್ರಧಾನತೆಯ ಹಲವು ಮುಖಗಳನ್ನು ಬಯಲಿಗೆಳೆಯಬೇಕಾಗಿದೆ. ಅವುಗಳ ವಿರುದ್ಧ ಸೆಡ್ಡು ಹೊಡೆದು ನಿಲ್ಲುವ ಶಕ್ತಿಯನ್ನು ಇವರಲ್ಲಿ ತುಂಬಬೇಕಾಗಿದೆ.

❑

## ಸೂತಕ ಕಳೆದು

ನಾನು ತಲೆ ಎತ್ತಬಾರದೆಂದೇ ಇದ್ದೆ
ಮೊನ್ನೆ ಮೊನ್ನೆಯವರೆಗೆ
ಮೊದಲಿಗೆ ನಾನು ಹಾಗೇನೂ
ಅಂದುಕೊಂಡಿರಲಿಲ್ಲ
ಆಮೇಲೆ ನನಗೂ ಹಾಗೇ ಅನ್ನಿಸತೊಡಗಿತು
ಕೀಟ, ಭೃಂಗವ ನೆನೆಸಿ ಭೃಂಗವೇ ಆಗುವ ಹಾಗೆ
ಥೀ! ಎಂಥ ಅಸಂಬದ್ಧ ಪ್ರತಿಮೆ!!
ನನ್ನ ಭಾಷೆಯ ಜಾಲಕ್ಕೊಂದು ಕಲ್ಲು ಬದ್ದಿದೆ
ಸಿಕ್ಕವರ ಕಾಲಡಿಗೆ ಬಿದ್ದು
ನಾ ಜಜ್ಜಿ ಹೋಗಲಿಲ್ಲ
ಅವರ ಕಾಲಿಗಂಟಿದ ಮಣ್ಣು
ನನಗಂಟಿ ಅಂಟಿ
ನೆಲದೊಂದಿಗೆ ನನ್ನ ಬೆಸೆಯುವ ಕವಚ
ಕಾಯಲೂ, ಮಾಯಲೂ, ಮಾಗಲೂ
ತಲೆಯ ತುದಿ ಮಾತ್ರ ಆಕಾಶಗಾಮಿ
ಅದಕ್ಕೆ ಸಾಧ್ಯ, ಅಸಾಧ್ಯಗಳ ರೆಕ್ಕೆಪುಕ್ಕ
ಆದರೂ ಕಾಣಿಸಿಕೊಳ್ಳಬಾರದಿತ್ತು ಎದುರಿಗೆ...
ಚೂಪಾದ ಉಗುರು ಅಗೆದೂ ಅಗೆದೂ
ತೋಡಿದ ಹೊಂಡಕ್ಕೆ
ತಲೆಕೆಳಗು, ಕಾಲುಮೇಲಾಗಿ
ಉರುಳಿದಾಗ
ಪಚಕ್ಕನೆ ಕೆಸರು, ಮುಖದ ತುಂಬಾ
ಗುರುತೇ ಇಲ್ಲ......
ರೆಕ್ಕೆ ಚಾಚುವುದೆಲ್ಲಿಗೆ?
ಏರುವುದೇ ಪ್ರಗತಿಯೆನಿಸಿರುವೆಡೆಯಲ್ಲಿ
ಆಳದ ಸಂಗತಿಯೆಲ್ಲ ಭಾರ ಭಾರ
ಆಳಕ್ಕೆ ಚಾಚಿಕೊಂಡಂತೆಲ್ಲ ಮೇಲಕ್ಕೂ ಹಸಿರು..
ನನ್ನಾಳ, ಎತ್ತರಕ್ಕೀಗ ಗುರುತಿನ ಸೂತಕವಿಲ್ಲ.



● ಭಾರತೀದೇವಿ ಪಿ.

# ಒಳ-ಹೊರಗುಗಳ ಸಂಬಂಧ: ರೂಪಶ್ರೀ ಅವರ ಕಲೆ

● ಪ್ರೊ. ಎಂ.ಎಚ್.ಕೃಷ್ಣಯ್ಯ


Ideal Occupation


I can recall occasions

ಒಂದು ಸಂದರ್ಭ ನೆನಪಾಗುತ್ತದೆ. ಮಾರನೆಯ ದಿನ ಕನ್ನಡದ ಪ್ರಮುಖ ಆಧುನಿಕ ಕವಿಗಳ ಬಗ್ಗೆ ವಿಚಾರ ಸಂಕಿರಣವಿತ್ತು. ಆ ಕುರಿತು ಯೋಚನೆಯಲ್ಲಿದ್ದಾಗ ರಾತ್ರಿ ದೂರವಾಣಿ ಕರೆ ಬಂತು. ಆ ಕಡೆಯ ಅಪರಿಚಿತ ಧ್ವನಿ ಕೇಳಿದ ಪ್ರಶ್ನೆ: "ನಾನು ಯಾರು ಹೇಳಿ?" ತಟಕ್ಕನೆ ಮನಸ್ಸಿಗೆ ಹೊಳೆದದ್ದು–ಈ ಪ್ರಶ್ನೆಯನ್ನು ಕಾಲದುದ್ದಕ್ಕೂ ತತ್ತ್ವಜ್ಞಾನಿಗಳು, ಕವಿಗಳು, ಕಲಾವಿದರು ಕೇಳಿಕೊಂಡಿದ್ದಾರಲ್ಲವೆ? ಅದಕ್ಕೆ ಉತ್ತರ ಹುಡುಕುವುದೇ ಅವರ ಸಿದ್ಧಾಂತ ದರ್ಶನ, ಕಾವ್ಯ, ಕಲಾಕೃತಿಗಳಾಗಿವೆಯಲ್ಲವೆ? ಇಷ್ಟಾದರೂ ಮನುಷ್ಯನ ಅಸ್ತಿತ್ವದ ಒಗಟು ಬಿಡಿಸಲು ಸಾಧ್ಯವಾಗಿದೆಯೆ? ಅಸ್ತಿತ್ವಕ್ಕೆ ಒಂದು ಅರ್ಥ ಕಾಣಲು ಸಾಧ್ಯವಾಯಿತೇ? ಆಗ ಎನಿಸುತ್ತೆ ಸತ್ಯಕ್ಕೆ, ಅಸ್ತಿತ್ವಕ್ಕೆ ಎಷ್ಟು ಮುಖಗಳು ಎಂದು. ಮಾರನೆಯ ದಿನ ನನ್ನ ಮಾತುಗಳಿಗೆ ಇದೇ ಪೀಠಿಕೆಯಾಯಿತು. ಐದಾರು ವರ್ಷಗಳ ಹಿಂದೆ ಕಲಾವಿದೆ ರೂಪಶ್ರೀಯವರು ಏರ್ಪಡಿಸಿದ್ದ ಕಲಾಪ್ರದರ್ಶನ 'ವಿಭ್ರಾಂತಿ' ಎಂಬ ಚಿತ್ರ ಸರಣಿ. ಸರಣಿಯ ಕಲಾಕೃತಿಗಳನ್ನು ನೋಡಿದಾಗ, ಆ ಘಟನೆ ಮತ್ತೆ ಮತ್ತೆ ನೆನಪಾಗುತ್ತದೆ. ಕಾಲ, ಸಂದರ್ಭ, ತಮ್ಮ ಅನುಭವಗಳ ಸಂವೇದನೆಗಳ ಹಿನ್ನೆಲೆಯಲ್ಲಿ ರೂಪಶ್ರೀಯವರೂ ನಮ್ಮ ಅಸ್ತಿತ್ವಕ್ಕೆ ನಿಸರ್ಗದೊಡನೆ ಸಂಬಂಧ ಕಾಣುವ ಅರಸುವಿಕೆ, ಚಿಂತನೆ ನಡೆಸಿದ್ದಾರೆ. ಎಲ್ಲ ಹಿಂದಿನವರಿಗೆ ಆದಂತೆ ಇಲ್ಲೂ ದಕ್ಕುವುದು ಒಂದು ಕ್ಷಣದ, ಒಂದು ಮುಖದ ಹೊಳಹು ಮಾತ್ರ ಅದು ಅವರ ಸೂಕ್ಷ್ಮ ಸಂವೇದನಾಶೀಲ ಮನಸ್ಸಿನ ಗ್ರಹಿಕೆಗೆ ಒದಗುವಂತಹುದು.

ನಿಸರ್ಗದ ನಡುವೆ, ಜೊತೆಜೊತೆಗೆ, ಅಕ್ಕಪಕ್ಕ, ಪಾರದರ್ಶಕವೆಂಬಂತೆ ಒಳ-ಹೊರಗು ಹಾಸುಹೊಕ್ಕಾಗಿ ಲಿಂಗಾತೀತ ಮನುಷ್ಯನನ್ನು ಇಟ್ಟು ನೋಡುತ್ತಾರೆ, ಕಲ್ಪಿಸಿಕೊಳ್ಳುತ್ತಾರೆ. ಆಗ ಸೂಕ್ಷ್ಮಾರ್ಥಗಳ ಧ್ವನಿ, ಇದುವರೆಗೆ ಅಪರಿಚಿತ ಎನಿಸಿದ್ದ ಭಾವನೆ, ಸಂವೇದನೆಗಳು ತೆರೆದುಕೊಳ್ಳುತ್ತವೆ. ನೋಡುಗನ ಕಲ್ಪನೆಯೂ, ಸಂವೇದನೆಯೂ ವಿಸ್ತರಿಸುತ್ತದೆ. ಇದು ವಿಶೇಷ, ಇದು ಕಲಾವಿದೆ ರೂಪಶ್ರೀ. ಕಲಾವಿದ, ವಿಮರ್ಶಕ ರಮೇಶಚಂದ್ರ ಅವರು ಈ ಕಲಾಕೃತಿಗಳು ಅಕ್ಕಮಹಾದೇವಿಯ ವಚನಗಳನ್ನು, ಅಕ್ಕ–ಚೆನ್ನಮಲ್ಲಿಕಾರ್ಜುನರ ಸಂಬಂಧವನ್ನು ನೆನಪಿಸುತ್ತವೆ ಎನ್ನುತ್ತಾರೆ. ಒಂದು ಸ್ತರದಲ್ಲಿ ಹಾಗೆನ್ನಿಸಬಹುದು. ಆಕೆಯೂ ತೆಂಗು, ಬಾಳೆ, ಮರ, ಗಿಡ, ಎಲೆ, ಹೂವು, ಕೋಗಿಲೆ, ಗಿಳಿ, ನವಿಲು, ದುಂಬಿ ಮೊದಲಾದ ರೂಪಕಗಳನ್ನು ಬಳಸಿದ್ದಾಳೆ. ಸುತ್ತಲ ನಿಸರ್ಗವೆಲ್ಲ ಚೆನ್ನಮಲ್ಲಿಕಾರ್ಜುನನೆ. ಧ್ವನಿ, ಇಂಗಿತ ಅರಿವಾಗುತ್ತದೆ. ರೂಪಶ್ರೀ ಮನುಷ್ಯನ ಒಳ–ಹೊರ ಜಗತ್ತುಗಳ ಸಂಬಂಧ ಅರಸುತ್ತಾರೆ. ವಿಜ್ಞಾನ ತೆರೆಸಿದ ಕಣ್ಣು, ಸಂವೇದನೆ ಅನುಭವಗಳು ಅಂತರ್ಬೋಧೆ ಹೊಳೆಯಿಸಿದ ಕಲ್ಪನೆ, ಮೂಡಿಸಿದ ಭ್ರಮಾಲೋಕ– ಇವು ವಿಭ್ರಾಂತಿ ಎಂದು ಮೇಲೆ ತೋರಿದರೂ ಅಂತಃ ಸ್ತರಗಳ ಸಂಬಂಧವನ್ನು ಕಾಣಿಸುತ್ತವೆ. ಹೊರನೋಟ, ಒಳದನಿಗಳ ಹಾಸುಹೊಕ್ಕಾದ ಸಂಬಂಧಗಳು–ಇದುವೆ ಒಂದು ಕಾಣ್ಕೆ.

ದೃಶ್ಯಾತ್ಮಕ ಸೂಕ್ಷ್ಮ ನವಿರು ಚಿತ್ರಣದಲ್ಲಿ ಗಿಡ ಮರ ಎಲೆಗಳು, ಎಲೆಗಳ ಜೀವಸತ್ವ ಹೀರಿ ಹರಡುವ ನರವಿನ್ಯಾಸಗಳು, ಮನುಷ್ಯನ ಒಳಗೆ, ಶರೀರದಲ್ಲಿ ಜೀವಧಾತು ಚೈತನ್ಯಕ್ಕೆ ಕಾರಣವಾಗಿ ಹರಡಿ ಆವರಿಸಿರುವ ಬಗೆ, ಒಂದಾದರೆ, **ಐಡಿಯಲ್ ಆಕ್ಯುಪೇಷನ್** (ಚಿತ್ರ–1)ನಲ್ಲಿ, ಎಲೆಗಳ ಪಾರದರ್ಶಕ ವಸ್ತ್ರ ವಿನ್ಯಾಸದ ನಡುವೆಯ ಬೆನ್ನಹುರಿಯ ನರವಿನ್ಯಾಸ ಮಾನಸಿಕ ಸ್ತರದ ನೆನಪು ಮಾಡುತ್ತವೆ. ಎಲೆಗಳ ಬಳ್ಳಿ ಹಬ್ಬಿದಂತೆ.

***ಎಸ್.ಆರ್.ರೂಪಶ್ರೀ ಚಿತ್ರಕಲಾಪರಿಷತ್ತಿನಿಂದ ಚಿತ್ರಕಲೆಯಲ್ಲಿ ಪದವಿ ಪಡೆದವರು. ಅನಂತರ ಭಿತ್ತಿ ಚಿತ್ರಕಲೆ, ಪ್ರಿಂಟ್ ಮಾಧ್ಯಮದಲ್ಲೂ ವಿಶೇಷ ಅಧ್ಯಯನ ಮಾಡಿದವರು, ಅನುಭವ ಗಳಿಸಿದವರು. ಏಕವ್ಯಕ್ತಿ ಕಲಾಪ್ರದರ್ಶನಗಳಲ್ಲದೆ ಬೆಂಗಳೂರು, ಮೈಸೂರು, ಚೆನ್ನೈ, ಮುಂಬಯಿ, ಅಹಮದಾಬಾದ್, ಹೈದರಾಬಾದ್‌ಗಳಲ್ಲಿ ಸಮೂಹ ಪ್ರದರ್ಶನಗಳಲ್ಲಿ ಭಾಗಿಯಾಗಿದ್ದಾರೆ. ಅವರ ಪ್ರಯೋಗಶೀಲತೆ 'ಪ್ರಯೋಗ' ಮಾತ್ರವೆಂದು ಭಾವಿಸಿದರೆ ತಪ್ಪಾಗುತ್ತದೆ. ಅವರ ಚಿಂತನೆ, ಸಂವೇದನೆ, ಅನುಭವಗಳು ಪಡೆಯುವ ಪ್ರತ್ಯೇಕಿಸಲಾಗದ ಕೃತಿರೂಪಗಳು.***




ನಾನು ಬೇರೆಯಲ್ಲ. ಈ ಅವಿನಾಭಾವನೆಯೂ ಒಂದು ವಾಸ್ತವ. ಕಲಾಕೃತಿಗಳಲ್ಲಿ ನಿಸರ್ಗದ ಅಂಶಗಳು, ವ್ಯಕ್ತ ಅಂಗಗಳು, ರೂಪಗಳಾಗುತ್ತವೆ, ರೂಪಿಕೆಗಳಾಗುತ್ತವೆ; ಹಾಗೇ ಮನುಷ್ಯ ರೂಪ, ಅಂಗರೂಪಗಳೂ ಸಹ. ಬೆರೆತು, ಕರಗಿ, ಒಳ-ಹೊರಗುಗಳು ಕೂಡಿ ಒಂದು ಅನುಭವವನ್ನು ಕಟ್ಟಿಕೊಡುತ್ತವೆ. ಸಾವಿರ ಶಬ್ದಗಳು ವಿವರಿಸಲಾರದ ಸಂವೇದನೆಯ ಅನುಭವವಾಗುತ್ತದೆ.

ಅವರ ಇನ್ನೊಂದು ಚಿತ್ರ ಸರಣಿ ಪ್ರದರ್ಶನ ಒಂದು ವರ್ಷದ ಹಿಂದೆ ನಡೆದದ್ದು. ಯಾವುದೇ ಗ್ಯಾಲರಿಯಲ್ಲಲ್ಲ, ಕಲಾವಿದೆಯ ಸ್ಟುಡಿಯೋದಲ್ಲಿ, ರೂಪಶ್ರೀಯವರ ಮನೆಯಲ್ಲಿ. ಎಂದರೆ ಒಬ್ಬ ಗೃಹಿಣಿಯ ಮನೆ, ಒಬ್ಬ ಕಲಾವಿದೆಯ ಸ್ಟುಡಿಯೋ, ಅಲ್ಲಿ ಆಕೆಯ ಅಭಿವ್ಯಕ್ತಿ ತಳೆದ ಕಲಾಕೃತಿಗಳು, ಅವುಗಳನ್ನು ಇರಿಸಿರುವ, ಪ್ರದರ್ಶಿಸಿರುವ ಬಗೆ-ಎಲ್ಲವೂ ರಂಗಸಂಜ್ಞೆಗಳಂತೆ ಮಾಡುವ ಅರ್ಥೋತ್ಪಾದನೆ, ಚೋದಿಸುವ ನೆನಪು, ಅನುಭವಗಳು. **'ಇಂಟಿಮೇಟ್ ಇಂಟೀರಿಯರ್ಸ್'** ಪ್ರದರ್ಶನದ ಶೀರ್ಷಿಕೆ. ಆತ್ಮೀಯ ಒಳಾಂಗಣ. ಈ ಪ್ರದರ್ಶನ ಸ್ಪಷ್ಟಾಸ್ಪಷ್ಟ. ಚಿತ್ರಗಳನ್ನು ಗ್ಯಾಲರಿಯಲ್ಲಿಯಂತೆ ಗೋಡೆಗೆ ತೂಗು

**'ಐಕೆನ್‌ರಿಕಾಲ್ ಅಕೇಷನ್ಸ್'** (ಚಿತ್ರ-2)ನಲ್ಲಿ ಬೆನ್ನಿನ ಮೂಳೆಯ ಹಂದರ, ಎಲೆಗಳ ಒಳಗಿನ ಮನುಷ್ಯಾಕೃತಿಗಳು. ಅವು ಎಲೆಯ ಮೇಲೆ ನಿಂತಂತೆ. ಇನ್ನೊಂದರಲ್ಲಿ ಪುಷ್ಪದ ದಳಗಳ ರೂಪ, ಒಂದು ದಳ ಮಷೂರದಲ್ಲಿ ತೋರಿದಂತೆ ಉತ್ಪ್ರೇಕ್ಷಿತ, ಅದರೊಳಗೆ ಹೆಣ್ಣಿನ ನಗ್ನ ಶರೀರ, ಅದರಿಂದ ಚಿಗುರಿದಂತಹ ಎಲ್, ವಿನ್ಯಾಸ. ನಾಲ್ಕು ಜೆಲ್ಲಿ ಮೀನುಗಳ ದೃಶ್ಯ, ಮನುಷ್ಯಾ ಕೃತಿಯೊಳಗೆ ಆಕೃತಿಗಳ ಕಾಲುಗಳಲ್ಲಿ ಬೇರುಗಳು. ಬಾಳೆ ಎಲೆಯ ಆಕಾರ ಚಿರಪರಿಚಿತ (ಚಿತ್ರ 3). ಅದಕ್ಕೂ ಮನುಷ್ಯನ ಬೆನ್ನಿನ ಚರ್ಮವಿನ್ಯಾಸಕ್ಕೂ ಸಂಬಂಧ ಅಪರಿಚಿತ. ಅಂತರ್ಬೋಧೆಯ ಈ ಹೊಳಹುಗಳು, ಈ ರೂಪ, ಈ ವಿನ್ಯಾಸ, ಒಳ-ಹೊರಗುಗಳ ಹಾಸುಹೊಕ್ಕು, ಭ್ರಮೆಯಲ್ಲ, ಮೇಲ್ಪದರದಲ್ಲಿ ತೋರುವಂತೆ. ವಿಜ್ಞಾನ ಹೇಳುತ್ತದೆ ದೂರದ ನಕ್ಷತ್ರದಲ್ಲಿರುವ ಪರಮಾಣುಗಳು, ನಮ್ಮ ಶರೀರ ರೂಪುಗೊಳ್ಳಲು ಕಾರಣವಾದುವು, ಅಣು ಅಥವಾ ಮಾಲೆಕ್ಯೂಲ್‌ಗಳು ಬೇರೆಯಲ್ಲ ಎಂದು. ದೂರದ ಚುಕ್ಕೆ ಇರಲಿ ಸುತ್ತಲ ನಿಸರ್ಗ ಮತ್ತು

ಹಾಕಿಲ್ಲ, ಮುಂದೆ ಇಟ್ಟಿದೆ, ಅಲಂಕಾರ ಪೀಠೋಪಕರಣಗಳಂತೆ ಇರಿಸಿದೆ; ಅವುಗಳ ಜೊತೆ ಜೊತೆಗೆ ಚಿತ್ರದೊಳಗೂ ಪೀಠಗಳಿವೆ. ಹೊರಗೂ ಮನೆಯಂಗಳದಲ್ಲೂ ಇವೆ. ಕಲಾವಿದೆ ಚಿತ್ರಗಳನ್ನು ರಚಿಸಿದ ಸ್ಟುಡಿಯೋ ಇದೆ. ಕಲಾವಿದೆ ಗೃಹಿಣಿಯಾಗಿ ಒಡನಾಡುವ ತಾಣ ಇದೇ. ಈ ಅಂಗಣದಲ್ಲಿ ಚಿತ್ರದೊಳಗಿನ ಅಭಿವ್ಯಕ್ತ ಅನುಭವಗಳ ಅಂಗಣವೂ ಇದೆ. ಚಿತ್ರದ ಒಳಗು, ಚಿತ್ರದ ಹೊರಗು ಎರಡು ಮುಖ್ಯವಾಗುತ್ತವೆ. ಪರಸ್ಪರ ಸ್ಪಂದಿಸುತ್ತ ಪ್ರತಿಫಲಿಸುತ್ತ ಸಂಬಂಧಹೊಂದುತ್ತವೆ (ಚಿತ್ರ 4,5,6). ರೂಪಶ್ರೀ ಕಲಾವಿದೆಯಾಗಿ ಭಾವನೆ, ಕಲ್ಪನೆ, ಚಿಂತನೆಗಳ ಒಡನಾಟ, ಮತ್ತು ವ್ಯಕ್ತಿಯಾಗಿ, ಗೃಹಿಣಿಯಾಗಿ ಪಡೆವ ಅನುಭವಗಳ ಒಡನಾಟ ದ್ವಂದ್ವ ಎನಿಸಿದರೂ ಆ ದ್ವಂದ್ವ ಧ್ವನಿಯಿಸುವ ಮೂರನೆಯ ಅರ್ಥ ಒಂದಿದೆ, ಅನುಭವ ಒಂದಿದೆ. ಅಂಗಣ ಒಳಗಿನದೂ ಆಗುತ್ತದೆ; ಹೊರಗಿನದೂ ಆಗುತ್ತದೆ. ಹೊರಗಿನದು ಚಿತ್ರದ ಒಳಗೂ ಇದೆ, ಶಿಲ್ಪಗಳಂತೆ ಹೊರಗೂ ಇದೆ. ಈ ಸಂಕೀರ್ಣ ಅನುಭವಗಳ ಸ್ಪಷ್ಟತೆಗಾಗಿ












ಹುಡುಕಾಟ ಸ್ಫುಟಗೊಂಡು ಎಂದೂ ನಿಲ್ಲುವುದಿಲ್ಲ, ಮಸುಕಾಗಿಯೇ ಗ್ರಹಿಸಬೇಕಾಗುತ್ತದೆ. ಕಲಾವಿದೆ ನಿಸರ್ಗ ಮತ್ತು ಮನುಷ್ಯ ಸಂಬಂಧಗಳಿಂದ ಮನೆಯೊಳಕ್ಕೆ ಬಂದರೂ ಅದು 'ಒಳಗು' ಮಾತ್ರವೆಯೆ? ಮನೆ-ಮನಗಳು, ಒಳ-ಹೊರಗುಗಳು, ಭೂತದ ನೆನಪು-ವರ್ತಮಾನದ ಅನುಭವ, ಹೊರಗು ನೋಡುವ ನೋಟ-ಒಳಗು ಕಾಣುವ ಬಗೆ ಈ ಹಲವು ದ್ವಂದ್ವಗಳು ಪ್ರದರ್ಶನ ನೋಡಿದಾಗ ಕಾಡುತ್ತವೆ. ಇಲ್ಲಿ ಕಲಾವಿದೆ ಒಬ್ಬ ಹೆಣ್ಣು, ಆ ಸೂಕ್ಷ್ಮಗಳು ಮುಖ್ಯವಾಗುತ್ತವೆ. ಅಭಿವ್ಯಕ್ತಿಯಲ್ಲಿ. ವಿಶಿಷ್ಟ ರೂಪ ತಳೆಯುತ್ತವೆ, ಸಂಬಂಧ ಪಡೆಯುತ್ತವೆ.

ಒಂದು ಚಿತ್ರ. ಕೆಂಪು ಹಿನ್ನೆಲೆಯಲ್ಲಿ ಅಸ್ಪಷ್ಟ, ಪಾರದರ್ಶಕ ಆಕೃತಿಗಳು. ಮುನ್ನೆಲೆಯಲ್ಲಿ ಎಡಗಡೆ ಕೈ ಕಟ್ಟಿ ಕುಳಿತ ಗಂಡು ಆಕೃತಿ. ಬಲಕ್ಕೆ ನೀಲವರ್ಣದಲ್ಲಿ ಇಬ್ಬರು ಹೆಣ್ಣುಗಳ ಆಕೃತಿಗಳು, ಒಂದು ಆಕೃತಿಯ ಮೈಮೇಲೆ ಹೆಣ್ಣು ಗಂಡು ವಿವಿಧ ಭಂಗಿಗಳ ಚಿತ್ರಿತ ಆಕೃತಿಗಳು (ಚಿತ್ರ 7). ವಾಸ್ತವವಾಗಿ ಹಿನ್ನೆಲೆಯ ಆಕೃತಿಗಳು ಸೂಚ್ಯಾರ್ಥ ಪೂರ್ಣ, ಏಕೆಂದರೆ ಮೈಕಲೇಂಜಲೊವಿನ ದೈವ ಮತ್ತು ಆ್ಯಡಂರ ಚಿತ್ರವನ್ನು ನೆನಪಿಸುತ್ತದೆ, ಅದರ ಮಸುಕು ನಿರೂಪಣೆ. ಯಹೋವನ ಚಾಚಿದ ತೋಳು, ಕೈ, ತೋರುಬೆರಳು; ಆ್ಯಡಂನ ಮೇಲೆ ಚಾಚಿದ ಕೈ. ಸ್ಪರ್ಶ, ಚೈತನ್ಯದಾಯಿ ಜೀವಸೃಷ್ಟಿಯ ಒಂದು ಮುಖ. ಅದಕ್ಕೆ ಮುನ್ನೆಲೆಯಾಗಿ ಗಂಡು ಹೆಣ್ಣು. ಗಂಡು ಹೆಣ್ಣನ್ನು ಕಾಣುವ ಬಗೆ, ಹೆಣ್ಣಿನ ಬಯಕೆಯ ಮುಖ. ಚಿತ್ರದ ಒಳಗು ಹೀಗಾದರೆ, ಅದಿರುವುದು ಗೃಹಿಣಿಯ ಮನೆಯಲ್ಲಿ. ವಿಮರ್ಶಕ ಅನಿಲ್‌ಕುಮಾರ್ ಹೇಳುತ್ತಾರೆ: "ರೂಪಶ್ರೀ ಚಿತ್ರಿಸಿರುವುದು ಬೇರೆ, ನೆನಪಿಸುವುದು ಬೇರೆ. ಅವೆರಡರ ಮಧ್ಯದ ವ್ಯತ್ಯಾಸ ಇವರ ಕೇಂದ್ರ ಆಸಕ್ತಿಯ ವಿಷಯ. ಆದ್ದರಿಂದ ಅವರ ಚಿತ್ರದೊಳಕ್ಕೆ ಪ್ರವೇಶಿಸುವುದೆಂದರೆ, ಅವರು ಬದುಕಿರುವ ಪರಿಸರವನ್ನೂ ಪ್ರವೇಶಿಸಿದಂತೆಯೇ ಹೌದು. ಇದೊಂದು ಕ್ರಿಯಾತ್ಮಕ ಇಬ್ಬಂದಿತನ."

ಇನ್ನೊಂದು ಚಿತ್ರವಿದೆ. (ನೋಡಿ: ಮುಖಪುಟ) ಶಂಖದಂತಹ ಸುರುಳಿಯ ಹಿನ್ನೆಲೆಯಲ್ಲಿ ಮೂರು ಆಕೃತಿಗಳು. ಕೆಳ ಎಡಭಾಗದಲ್ಲಿ ಕೈಗಳಿಂದ ತಲೆಹಿಡಿದು ಕುಳಿತ ಗಂಡು. ಪ್ರಧಾನವಾಗಿ ಚಿತ್ರವನ್ನು ಆವರಿಸುವ ನೀಲವರ್ಣಶರೀರಿ ಹೆಣ್ಣು. ಬಲಕ್ಕೆ ಮೇಲೆ ಮೂಲೆಯಲ್ಲಿ ಅರ್ಧ ವಿವಸ್ತ್ರಿತ ಆಕೃತಿ. ಕಲಾವಿದೆ ತನ್ನನ್ನೇ ಚಿತ್ರಿಸಿಕೊಂಡಿರುವುದೋ ಅಥವಾ ಹೆಣ್ಣಿನ ಪ್ರಾತಿನಿಧಿಕ ಸ್ಥಿತಿಯ ಚಿತ್ರಣವೋ ಆಗಬಹುದು. ಕಾಲದುದ್ದಕ್ಕೂ ಗಂಡು ಹೆಣ್ಣನ್ನು ಕಾಣುತ್ತ ಬಂದಿರುವ ಬಗೆ. ಒಂದು ಕೈಯಿಂದ ಎಳೆಯುತ್ತಿರುವ ವಸ್ತ್ರ/ಸೀರೆ, ಆಕೆಯ ಮೈಯಿಂದ ಜಾರುತ್ತಿರುವ ವಸ್ತ್ರ. ಕಾಲದುದ್ದಕ್ಕೂ ಕಾವ್ಯಗಳು, ಚಿತ್ರಗಳು, ಶಿಲ್ಪಗಳು ಪುರುಷ ಸೃಷ್ಟಿ ಹೆಣ್ಣನ್ನು ಕಂಡ ಬಗೆಯೇ ಬೇರೆ. ಹಿನ್ನೆಲೆಯ ಸುರುಳಿ ತೆರೆಯುವುದೆ? ಮುಚ್ಚುವುದೆ? ಇಂದಿನ ಅವಳ ವಾಸ್ತವವೇನು, ಆಕೆಯದೇ ಅಸ್ತಿತ್ವ ವ್ಯಕ್ತಿತ್ವಗಳು ಈ ಎರಡೂ ಜೊತೆಜೊತೆಗೆ ಅಥವಾ ಪ್ರತ್ಯೇಕವಾಗಿ ಉಳಿಯಬಲ್ಲುವು. ಆದರೆ ಒಟ್ಟಿಗೆ ನೋಡಿದಾಗ ದ್ವಂದ್ವ ಸ್ಪಷ್ಟ. ಒಂದು ಕ್ಷಣ ನನಗೆ ಮಹಾಭಾರತ, ದ್ರೌಪದಿಯ ನೆನಪೂ ಆಯಿತು. ಅನಿಲ್ ಹೇಳುತ್ತಾರೆ: "ಇವರ ಚಿತ್ರಗಳಲ್ಲಿ ಅರ್ಥಗಳು ನಿರಂತರ ಬದಲಾಗುತ್ತವೆ. ಆಕಾರಗಳು ಹೊರಗಿನ ಜಗತ್ತನ್ನು ನೆನಪಿಸುವಾಗ ಒಂದರ್ಥ ಪಡೆಯುತ್ತವೆ. ನೆನಪಿಸಿದಾಗ 'ಒಂದರ್ಥ' ಎಂಬ ಅರ್ಥವನ್ನೇ ಕಳೆದುಕೊಂಡು ಸೂಚ್ಯಾರ್ಥಗಳನ್ನು ನೀಡುತ್ತ ಅನೇಕವಾಗುತ್ತವೆ. ಆ ಅನುಭವ ಪಡೆವ ಪ್ರಯತ್ನದಲ್ಲಿ ವೀಕ್ಷಕ ಒಂದು ಮಾಮೂಲು ಪ್ರದರ್ಶನ ನೋಡುವಾಗ ನಿರಾಳವಾಗಿರುವಂತೆ ಇರಲಾಗದು. ಅರ್ಥ ತತ್ತ್ವಗಳ ಉಸಿರುಗಟ್ಟಿಸುವಿಕೆಯ ಅನುಭವ ಅವನಿಗಾದರೆ ಅದೇ ಈ ಕಲಾವಿದೆಯ ಸಂಯೋಜಿತ ಉದ್ದೇಶ ಕೂಡ." ಕಾಡುವ ಗುಣ ಎಂದರೆ ಇದೇ ಅಲ್ಲವೆ. ❑

*Edited, Printed, Published and owned by Rajeshwari H.S., No. 114/5, 9th Cross*
*2nd Main, Chamarajpet, Bangalore - 560 018.*
*Printed at ILA Mudrana, No. 36, 40 Ft. Road, Raghavanagara, New Timberyard Layout, Bangalore - 560 026.*
*Published at No. 114/5, 9th Cross, 2nd Main, Chamarajpet, Bangalore - 560 018. Editor : Rajeshwari H.S.*

# ಹೊನ್ನಿನ ಹಂದರದಲ್ಲಿ
# ಸುಂದರ ಕರ್ನಾಟಕ-

**ಕರುನಾಡ ಸಿರಿನುಡಿ - ಕನ್ನಡ**
**ಕಸ್ತೂರಿ ಪರಿಮಳದ ಕುಡಿ - ಕನ್ನಡ ನುಡಿ**
**ಹಾಲ್ಜೇನಿನ ಮಧುರ ಝರಿ - ಕನ್ನಡ ನಾಣ್ನುಡಿ**

ಸುಮಾರು 2000 ವರ್ಷಗಳ ಇತಿಹಾಸವಿರುವ ಕನ್ನಡ ಭಾಷೆ, ಸಾಹಿತ್ಯ ಅನನ್ಯ ಮತ್ತು ಅನುಕರಣೀಯ. ಇಂದು ಕೂಡ ಕರ್ನಾಟಕ ಸಮಗ್ರ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ಆಟೋಮೊಬೈಲ್ ಉದ್ಯಮ, ಸಿದ್ಧ ಉಡುಪು, ಆಭರಣಗಳು, ಕ್ರೀಡೆ, ಪುಷ್ಪೋದ್ಯಮದಂತಹ ಪ್ರಮುಖ ಕ್ಷೇತ್ರಗಳಲ್ಲಿ ಸಾಧಿಸಿದ ಪ್ರಗತಿಯೂ ಶ್ಲಾಘನೀಯ, ಕರ್ನಾಟಕ ಭಾರತಕ್ಕಷ್ಟೇ ಮಾತ್ರವಲ್ಲ ಇಡೀ ವಿಶ್ವಕ್ಕೆ ಮಾದರಿ.

**ಅಪಾರ ಕೀರ್ತಿ ಗಳಿಸಿ ಮೆರೆವ ಭವ್ಯನಾಡಿಗೆ... ಇಂದು ಸುವರ್ಣ ಸಂಭ್ರಮ**



ಕರ್ನಾಟಕ ವಾರ್ತೆ
**Karnataka information**

ಸುವರ್ಣ ಕರ್ನಾಟಕ ವರ್ಷ:2006

Registered with Registrar of Newspapers of India under No. KARKAN/2007/22289
**'NAMMA MANASA'**, REGD. No. : MAG(3) NPP/399(A) / 2006-07 KA/BGS/2074/2007-09

# ನಮ್ಮ ಮಾನಸ

- ಮಹಿಳೆಯರಿಗೆ ಸಂಬಂಧಿಸಿದ ಲೇಖನಗಳು, ವರದಿಗಳು ವಿಶ್ಲೇಷಣೆಗಳು, ವಿಮರ್ಶೆಗಳು, ಅನುಭವಗಳು, ಕತೆ-ಕವನಗಳನ್ನು ನಮ್ಮ ಪತ್ರಿಕೆಯಲ್ಲಿ ಪ್ರಕಟಿಸಲಾಗಿದೆ.
- ಪತ್ರಿಕೆಯು ವಿಷಯಾಧರಿತವಾಗಿದ್ದು, ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಮಹಿಳೆಯರ ಬದುಕಿನ ಮೇಲೆ ಪರಿಣಾಮ ಬೀರುವ ಸಾಮಾಜಿಕ, ರಾಜಕೀಯ, ಆರ್ಥಿಕ ವಿಚಾರಗಳನ್ನು ಚರ್ಚಿಸಲಾಗಿದೆ.
- ವಿವಾಹ, ಕುಟುಂಬದಂತಹ ಸಾಮಾಜಿಕ ಸಂಸ್ಥೆಗಳು, ಮನೆಗೆಲಸ, ಸಂಬಳರಹಿತ ದುಡಿಮೆ, ಆರ್ಥಿಕ ನೀತಿ, ಜಾತಿ, ವರ್ಗ, ಸೌಂದರ್ಯ, ಲಿಂಗ, ಹೆಣ್ತನ ಮುಂತಾದ ವಿಷಯಗಳನ್ನು ಚರ್ಚೆಗೊಳಪಡಿಸಿ ಪ್ರಕಟಿಸಲಾಗಿದೆ. ಗುತ್ತಿಗೆ ಪೌರಕಾರ್ಮಿಕರ ಹೋರಾಟಗಳಿಗೆ ಸ್ಪಂದಿಸಿ ಲೇಖನಗಳನ್ನು ಪ್ರಕಟಿಸಿದೆ.
- ಆರೋಗ್ಯ, ಲೈಂಗಿಕತೆ, ಅಪಾಯಕಾರೀ ಗರ್ಭ ನಿರೋಧಕಗಳು, ಆರ್ಥಿಕತೆ ಮತ್ತು ಅಭಿವೃದ್ಧಿ, ಅಭಿವೃದ್ಧಿ ಯೋಜನೆಗಳು ಮುಂತಾದ ವಿಚಾರಗಳನ್ನು ವಿಮರ್ಶೆಗೊಳಪಡಿಸಲಾಗಿದೆ.
- ಅಣ್ವಸ್ತ್ರೀಕರಣ, ಮಿಲಿಟರೀಕರಣ, ಜಾಗತೀಕರಣದಂಥ ಬೆಳವಣಿಗೆಗಳನ್ನು ಮಹಿಳಾ ದೃಷ್ಟಿಕೋನದಿಂದ ಪ್ರಶ್ನಿಸಲಾಗಿದೆ.
- ಇತರ ಪ್ರಜಾಸತ್ತಾತ್ಮಕವಾದ ಸಂಘಟನೆಗಳೊಡನೆ ಕೋಮುವಾದ, ಸಮಾನ ನಾಗರಿಕ ಸಂಹಿತೆ, ಮೀಸಲಾತಿ, ಲೈಂಗಿಕತೆ, ಪರಿಸರ, ಸ್ಥಳಾಂತರ ಮುಂತಾದ ವಿವಾದಗಳನ್ನು ಕುರಿತ ಚರ್ಚೆಗಳಲ್ಲಿ, ಆಂದೋಲನಗಳಲ್ಲಿ ಪಾಲ್ಗೊಳ್ಳಲಾಗಿದೆ.
- ಸ್ವಸಹಾಯ ಸಂಘಗಳನ್ನು ರಚಿಸುವ ಮೂಲಕ ಮಹಿಳೆಯರ ಸಬಲತೆಗೆ ಪ್ರೋತ್ಸಾಹ ನೀಡಲಾಗಿದೆ.
- ನಮ್ಮದೇ ಮಿತಿಯಲ್ಲಿ ತೊಂದರೆಗೊಳಗಾದ ಮಹಿಳೆಯರಿಗೆ ಸಲಹೆ, ನೈತಿಕ ಬೆಂಬಲಗಳಲ್ಲದೆ ಕಾನೂನಿನ ನೆರವನ್ನು ನೀಡುತ್ತಿದ್ದೇವೆ.
- ಮಹಿಳೆಯರು ತಾವಿದ್ದೆಡೆಯಲ್ಲಿ ಮಹಿಳಾ ಪತ್ರಿಕೆಗಳನ್ನು ಹೊರತರಲು ಪ್ರಯತ್ನಿಸಿದಲ್ಲಿ, ಗುಂಪುಗಳನ್ನು ರಚಿಸಬೇಕಾದಲ್ಲಿ ಸಹಕರಿಸಲು ಉದ್ದೇಶಿಸಿದ್ದೇವೆ.

Registered Magazine

*Posted on 9th of every month at Chamarajpet Post Office*

ವಿಳಾಸ :
ನಮ್ಮ ಮಾನಸ
114/5, 9ನೇ ತಿರುವು, 2ನೇ ಮುಖ್ಯರಸ್ತೆ, ಚಾಮರಾಜಪೇಟೆ
ಬೆಂಗಳೂರು - 560 018